KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೨ | ಬೆಂಗಳೂರು, ಗುರುವಾರ, ಜನವರಿ ೨೫, ೨೦೦೭ (ಮಾಘ ೫, ಶಕ ವರ್ಷ ೧೯೨೮) | ಸಂಚಿಕೆ ೪ |
|---|---|---|



## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**

**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ,**

**7ನೇ ಮಹಡಿ, ಕಾವೇರಿ ಭವನ, ಜಲಮಂಡಳಿ ಕಟ್ಟಡ, ಬೆಂಗಳೂರು**

**ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ-1-65/2001-02, ದಿನಾಂಕ: 18ನೇ ಡಿಸೆಂಬರ್ 2006**

**ವಿಷಯ:** ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಯಾದ ಅಭ್ಯರ್ಥಿಯನ್ನು ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ನೇಮಕ ಮಾಡುವ ಕುರಿತು.

**ಉಲ್ಲೇಖ:** ಕಾರ್ಯದರ್ಶಿಯವರು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಅವರ ಪತ್ರ ಸಂಖ್ಯೆ: ಇ (2)-553/ 06-07/ಪಿಎಸ್‌ಸಿ ದಿನಾಂಕ: 17.07.2006.

ಕರ್ನಾಟಕ ಲೋಕಸೇವಾ ಆಯೋಗದಿಂದ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಆಯ್ಕೆಯಾಗಿ ನೋಂದಣಿ ಮತ್ತು ಮುದ್ರಾಂಕ ಇಲಾಖೆಗೆ ಉಲ್ಲೇಖದನ್ವಯ ಹಂಚಿಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 4(i) ರನ್ವಯ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ತಾತ್ಕಾಲಿಕವಾಗಿ ಪ್ರಥಮ ದರ್ಜೆ ಸಹಾಯಕರಾಗಿ ವೇತನ ಶ್ರೇಣಿ ರೂ.3850-100-4450-125-5700-150-7050 ರಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ನೇಮಕ ಮಾಡಿ ಇವರನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಗಳಿಗೆ ಸ್ಥಳ ನಿಯುಕ್ತಿ ಆದೇಶ ನೀಡಲಾಗಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ<br>ಶ್ರೀ/ಶ್ರೀಮತಿ | ಕೆ.ಪಿ.ಎಸ್.ಸಿ. ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ಪ್ರಥಮ ದರ್ಜೆ ಸಹಾಯಕರೆಂದು ನೇಮಕಾತಿ ಮಾಡಿದ ಕಛೇರಿ |
|---|---|---|---|
| 1 | ನಾಗರಾಜು ಬಿನ್ ಲೇಟ್ ತಗಡಯ್ಯ,<br>2ನೇ ಗುಂಬಸ್ ರಸ್ತೆ, ಗಂಜಾಂ, ಶ್ರೀರಂಗಪಟ್ಟಣ, ಮಂಡ್ಯ-571438. | 24 | ಉಪ ನೋಂದಣಿ ಕಛೇರಿ, ಬಾಲ್ಕಿ |

ಈ ನೇಮಕಾತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ ಮತ್ತು ಅಭ್ಯರ್ಥಿಗಳು ಈ ಷರತ್ತುಗಳಿಗೆ ಬದ್ಧರಾಗಿರತಕ್ಕದ್ದು.

1. ಈ ನೇಮಕಾತಿಯು ಅಭ್ಯರ್ಥಿಗಳ ಆಯ್ಕೆ ಪಟ್ಟಿಗೆ ಸಂಬಂಧಿಸಿದಂತೆ ಭಾರತದ ಸರ್ವೋಚ್ಛ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ (ಸಿವಿಲ್) 232/1999 ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಹಾಗೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಾಗಿರುವ ಅರ್ಜಿ ಸಂಖ್ಯೆ: 9024/2005, 9244/2005 ಹಾಗೂ 2076/2006ರ ಅರ್ಜಿಗಳಲ್ಲಿ ಆಗುವ ಘನ ನ್ಯಾಯಾಲಯಗಳ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ. ಹಾಗೂ ಅಭ್ಯರ್ಥಿಯು ಸದರಿ ಘನ ನ್ಯಾಯಾಲಯಗಳು ನೀಡುವ ತೀರ್ಪಿಗೆ ಬದ್ಧರಾಗಿರತಕ್ಕದ್ದು.
2. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಪರೀಕ್ಷಾರ್ಥ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಎಲ್ಲಾ ಅಭ್ಯರ್ಥಿಗಳು ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿರುವ (1) ಕನ್ನಡ ಭಾಷಾ ಪರೀಕ್ಷೆ (2) ಅಕೌಂಟ್ಸ್ ಹೈಯರ್ (3) ರಿಜಿಸ್ಟ್ರೇಷನ್ (4) ಜನರಲ್ ಲಾ ಭಾಗ-1 ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಕೆ.ಸಿ.ಎಸ್. (ಪ್ರೊಬೇಷನರ್) ರೂಲ್ಸ್ 1977ರ ಅಡಿಯಲ್ಲಿ ಕಟ್ಟುನಿಟ್ಟಿನ ಕ್ರಮ ಜರುಗಿಸಲಾಗುವುದು.

3. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾದ ಮೇಲೆ (1) ನಿಗಧಿತ ನಮೂನೆಯಲ್ಲಿ ಆಸ್ತಿ ವಿವರಣಾ ಪಟ್ಟಿಯನ್ನು ಮತ್ತು (2) ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸಿದ ನಂತರ ಸರ್ಕಾರಿ ಆದೇಶ ಸಂಖ್ಯೆ: ಜೆಎಡಿ/37/ಎಸ್‌ಆರ್‌ಆರ್/74 ದಿನಾಂಕ: 05.08.1974 ರನ್ವಯ ಪ್ರಥಮ ವೇತನ ಪ್ರಮಾಣ ಪತ್ರವನ್ನು ನೀಡಲಾಗುವುದು.
4. ಅಭ್ಯರ್ಥಿಯು ಯಾವುದೇ ಉದ್ಯೋಗ ವಿನಿಮಯ ಕೇಂದ್ರದಲ್ಲಿ ತಮ್ಮ ಹೆಸರನ್ನು ನೋಂದಾಯಿಸಿದ್ದಲ್ಲಿ ಅದರ ನೋಂದಣಿ ಪತ್ರವನ್ನು ಅಥವಾ ನೋಂದಣಿ ಮಾಡಿಸದೇ ಇದ್ದಲ್ಲಿ ನೋಂದಣಿ ಮಾಡಿಸಿಲ್ಲವೆಂಬ ಬಗ್ಗೆ ಅಭ್ಯರ್ಥಿಗಳು ಪ್ರಮಾಣ ಪತ್ರವನ್ನು ಪಡೆದು ಅದನ್ನು ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಸುಬ್ಬಯ್ಯ ವೃತ್ತ, ಬೆಂಗಳೂರು-27 ಇವರಿಗೆ ತಪ್ಪದೇ ಕಳುಹಿಸಿ ಮಾಹಿತಿಯನ್ನು ಈ ಕಛೇರಿಗೆ ನೀಡುವುದು.
5. ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವ ಮುನ್ನ ಭಾರತದ ಸಂವಿಧಾನಕ್ಕೆ ಬದ್ಧರಾಗಿರುವ ಬಗ್ಗೆ ಪ್ರತಿಜ್ಞೆ ಮಾಡಿದ ನಿಷ್ಠೆ ಪ್ರಮಾಣ ಪತ್ರವನ್ನು ಬರೆದು ಕೊಡತಕ್ಕದ್ದು.
6. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಎಫ್‌ಡಿ 65/ಎಸ್‌ಆರ್‌ಆರ್ 67, ದಿನಾಂಕ: 22.06.1967 ರನ್ವಯ ವೈದ್ಯಕೀಯ ಪ್ರಮಾಣ ಪತ್ರವನ್ನು ಜಿಲ್ಲಾ ಸರ್ಜನ್‌ರಿಂದ ಪಡೆದು ಹಾಜರ್ ಪಡಿಸತಕ್ಕದ್ದು.
7. ಸರ್ಕಾರದವರು ತಮ್ಮ ಆದೇಶ ಸಂಖ್ಯೆ: ಎಫ್‌ಡಿ (ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ: 31.03.2006 ರಲ್ಲಿ ಈ ಹಿಂದೆ ಜಾರಿಯಲ್ಲಿದ್ದ ನಿವೃತ್ತ ಪಿಂಚಣಿ ಸೌಲಭ್ಯ ಯೋಜನೆಯ ಬದಲಾಗಿ ದಿನಾಂಕ: 01.04.2006 ರಿಂದ ಜಾರಿಗೆ ಬರುವಂತೆ ಹೊಸದಾಗಿ New Defined contributory Pension Scheme ಎಂಬ ಹೊಸ ಪಿಂಚಣಿ ಯೋಜನೆಯನ್ನು ಜಾರಿಗೆ ತಂದಿರುತ್ತಾರೆ. ಈ ಹೊಸ ಪಿಂಚಣಿ ಯೋಜನೆಯು ದಿನಾಂಕ: 01.04.2006 ರಿಂದ ಅಥವಾ ತದನಂತರ ನೇಮಕಾತಿ ಹೊಂದಿದ ಎಲ್ಲಾ ರಾಜ್ಯ ಸರ್ಕಾರಿ ನೌಕರರಿಗೆ ಅನ್ವಯಿಸುತ್ತದೆಂದು ಆದೇಶ ಮಾಡಿರುತ್ತಾರೆ.
ಆದ್ದರಿಂದ ಈ ಇಲಾಖೆಯಲ್ಲಿ ನೇಮಕ ಹೊಂದಿದ ಈ ಅಭ್ಯರ್ಥಿಗಳೆಲ್ಲರೂ ಸರ್ಕಾರದ ಸದರಿ ಆದೇಶದನ್ವಯ ಹೊಸ ಪಿಂಚಣಿ ಯೋಜನೆಗೆ ಒಳಪಡುತ್ತಾರೆಂದು ಈ ಮೂಲಕ ಆದೇಶಿಸಿದೆ ಹಾಗೂ ಸದರಿ ಆದೇಶದಲ್ಲಿನ ನಿರ್ದೇಶನಕ್ಕೆ ಅಭ್ಯರ್ಥಿಯು ಬದ್ಧರಾಗಿರತಕ್ಕದ್ದು.
8. ಅಭ್ಯರ್ಥಿಯು ಈ ನೇಮಕಾತಿ ಆದೇಶ ಮುಟ್ಟಿದ ಹದಿನೈದು ದಿವಸಗಳಲ್ಲಿ ನೇಮಕಾತಿ ಮಾಡಿದ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗತಕ್ಕದ್ದು ಇದಕ್ಕೆ ತಪ್ಪಿದಲ್ಲಿ ಅವರ ನೇಮಕಾತಿಯ ಆದೇಶವನ್ನು ನಿಯಮಾನುಸಾರ ರದ್ದುಪಡಿಸಲಾಗುವುದು. ಹಾಗೂ ನೇಮಕಾತಿ ಬಗ್ಗೆ ಅಭ್ಯರ್ಥಿಯು ಯಾವ ಹಕ್ಕನ್ನು ಹೊಂದಿರುವುದಿಲ್ಲವೆಂದು ತಿಳಿಯತಕ್ಕದ್ದು.
9. ಅಭ್ಯರ್ಥಿಯು ಅವರ ಸೇವಾ ಅವಧಿಯಲ್ಲಿ ಈ ಇಲಾಖೆಯ ವ್ಯಾಪ್ತಿಯಲ್ಲಿನ ಯಾವುದೇ ಕಛೇರಿಗೆ ನಿಯೋಜಿಸಿದ್ದಲ್ಲಿ ಅಲ್ಲಿ ಕರ್ತವ್ಯಕ್ಕೆ ಹಾಜರಾಗಲು ಬದ್ಧರಿರತಕ್ಕದ್ದು.
10. ಅಭ್ಯರ್ಥಿಯು ಸ್ಥಳ ನಿಯುಕ್ತಿ ಮಾಡಿರುವ ಕಛೇರಿಯಲ್ಲಿ ಹಾಜರಾದ ತಕ್ಷಣ ಕೇಂದ್ರೀಯ ಅಭಿಲೇಖಾಲಯ, ಶೇಷಾದ್ರಿಪುರಂ, ಬೆಂಗಳೂರು ಇಲ್ಲಿ ಗಣಕೀಕರಣ ತರಬೇತಿಗೆ ಹಾಜರಾಗತಕ್ಕದ್ದು.
11. ಅಭ್ಯರ್ಥಿಯು ತಮಗೆ ವಹಿಸಿದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಮಾಡತಕ್ಕದ್ದು.
12. ಅಭ್ಯರ್ಥಿಯು ಕೆಜಿಐಡಿ ಯಲ್ಲಿ ಸರ್ಕಾರಿ ವಿಮೆಯನ್ನು ಕಡ್ಡಾಯವಾಗಿ ಮಾಡತಕ್ಕದ್ದು.
13. ನೇಮಕಾತಿ ಮಾಡಿರುವ ಕಛೇರಿಯ ಮಾರ್ಪಾಡಿಗೆ ಯಾವುದೇ ಮನವಿಗಳನ್ನು ಯಾವುದೇ ಕಾರಣಕ್ಕೂ ಪುರಸ್ಕರಿಸಲಾಗುವುದಿಲ್ಲ.
14. ಎರಡು ವರ್ಷದ ಪರೀಕ್ಷಾರ್ಥ ಅವಧಿಯಲ್ಲಿ ಅಭ್ಯರ್ಥಿಯು ತಮ್ಮ ವರ್ಗಾವಣೆಗಾಗಿ ಯಾವುದೇ ರೀತಿಯ ಒತ್ತಡ ತಂದಲ್ಲಿ ಅಂತಹವರ ವಿರುದ್ಧ ಶಿಸ್ತು ಕ್ರಮ ಜರುಗಿಸಲಾಗುವುದು.
15. ಇಲಾಖೆ ನಿಯಮಿಸಿರುವ ಪರೀಕ್ಷಾರ್ಥ ಅವಧಿಯ ತರಬೇತಿ ಕಾರ್ಯಕ್ರಮವನ್ನು ತೃಪ್ತಿಕರವಾಗಿ ಪೂರ್ಣಗೊಳಿಸಿದಲ್ಲಿ ಮಾತ್ರ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವೆಂದು ಪರಿಗಣಿಸಲಾಗುವುದು.

ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ
ಪಿ.ಆರ್. 819 ಆಯುಕ್ತರು, ಬೆಂಗಳೂರು.

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, "ಉದ್ಯೋಗ ಸೌಧ", ಬೆಂಗಳೂರು**

**ತಿದ್ದುಪಡಿ ಸಂಖ್ಯೆ:ಇ.ಪ.(1)1266-67/2006-07/ಪಿಎಸ್‌ಸಿ, ದಿನಾಂಕ: 12ನೇ ಡಿಸೆಂಬರ್ 2006**

ಆಯೋಗದ ಅಧಿಸೂಚನೆ ಸಂಖ್ಯೆ:ಇಪ(1)890/2006-07/ ಪಿಎಸ್‌ಸಿ ದಿನಾಂಕ: 16.8.2006ರಲ್ಲಿ 2006ರಲ್ಲಿ ಪ್ರಕಟಿಸಲಾಗಿರುವ 2006ನೇ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶದಲ್ಲಿ "ಹಾಸನ" ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್-'ಎ' ಅಡಿಯಲ್ಲಿ "ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ-1 ಮತ್ತು "ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ-11" ರ ವಿಷಯದ ಶೀರ್ಷಿಕೆಯ ಕೆಳಗೆ ಸಾಮಾನ್ಯ ದರ್ಜೆ ರಡಿಯಲ್ಲಿನ ನೋಂದಣಿ ಸಂಖ್ಯೆಗಳೊಂದಿಗೆ ನೊಂದಣಿ ಸಂಖ್ಯೆ: 71766ನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ ಹಾಗೂ ಪರೀಕ್ಷೆಗಳ ನಿಯಂತ್ರಕರು,
ಪಿ.ಆರ್. 821 ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋ.ಇ. ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಅಲ್ಪಾವಧಿ ಟೆಂಡರ್ ಪ್ರಕಟಣೆ**

**ಟೆಂಡರ್ ಪ್ರಕಟಣೆ ಸಂಖ್ಯೆ: ಕಾಪಾಅ/ಶಿವಿಶಿ/ಸ.ಇಂ-2/ಕಟ್ಟಡ-28/2006-07, ದಿನಾಂಕ: 3ನೇ ಜನವರಿ 2007**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಆದ್ಯಾದೇಶ 2000 ಪ್ರಕಾರ ಆಕ್ಟ್ 2000ದ ನಿಯಮದಂತೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಐಟಂ ರೇಟ್ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗಡೆ ಸಹಿ ಮಾಡಿರುವುದರಿಂದ ಆಹ್ವಾನಿಸಲಾಗಿದೆ. ಅವುಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಸಾಯಂಕಾಲ 5.00 ಗಂಟೆಗೆ ಅಥವಾ ಇತರೆ ಅನುಕೂಲವಾದ ದಿನ ಟೆಂಡರುದಾರರು ಅಥವಾ ಅವರ ಏಜೆಂಟರುಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು. ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ. ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್, ಸಿ.ಡಿ.ಆರ್ (ಕಾರ್ಯಪಾಲಕ ಅಭಿಯಂತರು ಲೋಕೋಪಯೋಗಿ ಇಲಾಖೆ ವಿಭಾಗ ಶಿವಮೊಗ್ಗ ಇವರ ಹೆಸರಿಗೆ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ) ಬ್ಯಾಂಕ್ ಗ್ಯಾರಂಟಿ (ಕನಿಷ್ಟ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ, ಕಾರ್ಯಪಾಲಕ ಅಭಿಯಂತರವರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.

## ಟೆಂಡರಿಗಿಟ್ಟ ಕಾಮಗಾರಿಗಳ ವಿವರ

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇಎಂಡಿ ಮೊತ್ತ (ರೂ. ಗಳಲ್ಲಿ) | ಟೆಂಡರ್ ಫಾರಂ ಬೆಲೆ (ರೂ. ಗಳಲ್ಲಿ) | ಅರ್ಹರಾದ ಗುತ್ತಿಗೆದಾರರು | ಟೆಂಡರ್ ಕಾಮಗಾರಿಗಳನ್ನು ಪರಿಪೂರ್ಣವಾಗಿ ಮುಗಿಸಲು ನಿಗದಿಪಡಿಸಿದ ಕಾಲವಧಿ | ಟೆಂಡರ್ ಫಾರಂಗಳಿಗೆ ಅರ್ಜಿಯನ್ನು ಸ್ವೀಕರಿಸುವ ದಿನಾಂಕ ಸಂಜೆ 5:30ರ ವರೆಗೆ | ಖಾಲಿ ಟೆಂಡರ್ ಫಾರಂ ಕೊಡುವ ದಿನಾಂಕ ಸಂಜೆ 5:30 ರವರೆಗೆ | ಭತಿ ಮಾಡಿದ ಟೆಂಡರ್ ಫಾರಂ ಸ್ವೀಕರಿಸುವ ದಿನಾಂಕ ಸಂಜೆ 4:30 ಗಂಟೆ ವರೆಗೆ |
|---|---|---|---|---|---|---|---|---|---|
| 1 | ಶಿವಮೊಗ್ಗ ನಗರದಲ್ಲಿ ಮಿನಿ ವಿಧಾನ ಸೌಧ ಕಟ್ಟಡ ನಿರ್ಮಾಣ | 500.00 | 5,00,000 | 15,000 + ತೆರಿಗೆ | 1ನೇ ದರ್ಜೆ | 12 ತಿಂಗಳು ಮಳೆಗಾಲ ಸೇರಿ | 12.2.2007 | 15.2.2007 ರಿಂದ 17.2.2007 | 23.2.2007 |

## ನಿಬಂಧನೆಗಳು

- ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ ನಂ:ಪಿ.ಡಬ್ಲ್ಯ್.ಡಿ 344 ಸಿ.ಆರ್.ಎಮ್ 2000 ದಿನಾಂಕ: 15.1.2002ರ ಪ್ರಕಾರ ಈ ಕಾಮಗಾರಿಗಳಿಗೆ ನಿದಿಷ್ಟಪಡಿಸಿದ ಮೊತ್ತದ ಶೇಕಡ 30 ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಧಿಯಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.
- ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಗಳನ್ನು ವಿಳಂಬವಾಗಿ ಪೂರೈಸಿರಬಾರದು.
- ಸದರಿ ಕಾಮಗಾರಿಗೆ ಭಾಗವಹಿಸುವ ಗುತ್ತಿಗೆದಾರರು ಕೆಲಸಕ್ಕೆ ಅವಶ್ಯಕವಾದ 2-ಕಾಂಕ್ರೀಟ್ ಮಿಕ್ಸರ್, 2 ಪಿನ್ ವೈಬ್ರೇಟರ್, 2 ಪ್ಲಾಟ ವೈಬ್ರೇಟರ್, 1 ಸ್ವಯಂ ಚಾಲಿತ ಲಿಫ್ಟ್, ಸೆಂಟರಿಂಗ್ ಮೆಟೀರೀಯಲ್ಸ್ ಹಾಗೂ ಇತರೆ ಅವಶ್ಯಕವಾದ ವಸ್ತುಗಳ ಮಾಲಿಕತ್ವ ಹೊಂದಿರಬೇಕು. ಈ ಎಲ್ಲಾ ಯಂತ್ರೋಪಕರಣ ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಪತ್ರಗಳೊಂದಿಗೆ ಹಾಗೂ ಆದಾಯ ತೆರಿಗೆ, ವಾಣಿಜ್ಯ ತೆರಿಗೆ ಸಂದಾಯದ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದು.
- ಸದರಿ ಕಾಮಗಾರಿಯು 2 ಲಕೋಟೆಗಳನ್ನು ಹೊಂದಿದ್ದು ಲಕೋಟೆ-ಎ: ಟೆಕ್ನಿಕಲ್ ಬಿಡ್, ಲಕೋಟೆ-ಬಿ: ಫೈನಾನ್ಷಿಯಲ್ ಬಿಡ್‌ಗಳನ್ನು ಹೊಂದಿರುತ್ತದೆ. ಟೆಂಡರ್‌ದಾರರು ಟೆಂಡರ್‌ಗಳನ್ನು 2 ಪ್ರತ್ಯೇಕ ಲಕೋಟೆಗಳಲ್ಲಿ, ಮೊಹರಾದ ಲಕೋಟೆಯ ಮೇಲೆ ಲಕೋಟೆ-ಎ: ಟೆಕ್ನಿಕಲ್ ಬಿಡ್, ಲಕೋಟೆ-ಬಿ: ಫೈನಾನ್ಷಿಯಲ್ ಬಿಡ್ ಎಂದು ನಮೂದಿಸಿ ಮತ್ತೊಂದು ಲಕೋಟೆಯಲ್ಲಿ ಹಾಕಿ ಟೆಕ್ನಿಕಲ್ ಬಿಡ್, ಫೈನಾನ್ಷಿಯಲ್ ಬಿಡ್ ಎಂದು ನಮೂದಿಸಿ ಟೆಂಡರ್ ಸಲ್ಲಿಸತಕ್ಕದ್ದು.
- ಲಕೋಟೆ-ಎ: ಟೆಕ್ನಿಕಲ್ ಬಿಡ್ ಅನ್ನು ದ್ವಿಪ್ರತಿಗಳಲ್ಲಿ ಗುತ್ತಿಗೆದಾರರ ಬಳಿ ಇರುವ ತಾಂತ್ರಿಕ ಮಾಹಿತಿಗಳನ್ನು ಹೊಂದಿದ್ದು ಅವುಗಳಿಗೆ ವಿವರಗಳನ್ನು ನಿಗದಿತ ರೀತಿಯಲ್ಲಿ ಸಲ್ಲಿಸಬೇಕು. ಹಾಗೂ ಕಾಮಗಾರಿಗೆ ಅವಶ್ಯಕವಾದ ಇ.ಎಂ.ಡಿ. ನಿಗದಿಪಡಿಸಿದ ಮೊತ್ತವನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್, ಸಿ.ಡಿ.ಆರ್ (ಕಾರ್ಯಪಾಲಕ ಅಭಿಯಂತರು ಲೋಕೋಪಯೋಗಿ ಇಲಾಖೆ ವಿಭಾಗ ಶಿವಮೊಗ್ಗ ಇವರ ಹೆಸರಿಗೆ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ) ಬ್ಯಾಂಕ್ ಗ್ಯಾರಂಟಿ (ಕನಿಷ್ಟ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ ಕಾರ್ಯಪಾಲಕ ಅಭಿಯಂತರರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.
- ಲಕೋಟೆ-ಬಿ: ಫೈನಾನ್ಷಿಯಲ್ ಬಿಡ್ ಅನ್ನು, ಟೆಂಡರ್ ಶೆಡ್ಯೂಲನ್ನು ದ್ವಿ ಪ್ರತಿಯಲ್ಲಿ ಹೊಂದಿದ್ದು, ಪ್ರತಿ ಐಟಂಗಳಿಗೆ ದರವನ್ನು ಅಂಕೆಯಲ್ಲಿ ಮತ್ತು ಅಕ್ಷರಗಳಲ್ಲಿ ಸಲ್ಲಿಸಬೇಕು ಲಕೋಟೆ-ಎ ಅನ್ನು ಮೊದಲು ತೆರೆಯಲಾಗುವುದು ಹಾಗೂ ಗುತ್ತಿಗೆದಾರರು ಇದರಲ್ಲಿ ಒದಗಿಸಿರುವ ವಿವರಗಳನ್ನು ಪರಿಶೀಲಿಸಲಾಗುವುದು. ಕಮಿಷನರ್, ಕಮಿಷನರ್ ಆಫ್ ಟೆಂಡರ್ಸ್ ಬೆಂಗಳೂರು ಇವರ ತಂತಿ ಸಂದೇಶ ಸಂಖ್ಯೆ ಸಿ.ಬಿ.ಎಸ್: ಎ.ಬಿ.ಎಫ್:16:2002-03 ದಿನಾಂಕ:18.6.2002ರ ಆದೇಶದಂತೆ ತಾಂತ್ರಿಕ ಬಿಡ್ಡನ್ನು ಕಾರ್ಯಪಾಲಕ ಅಭಿಯಂತರವರು ತೆರೆದು ತುಲನೆಮಾಡಿ ಸಕ್ಷಮ ಪ್ರಾಧಿಕಾರದವರಿಂದ ಅನುಮೋದನೆಯಾದ ನಂತರ ಲಕೋಟೆ-ಬಿ ಫೈನಾನ್ಷಿಯಲ್ ಬಿಡ್ ಅನ್ನು ತೆರೆಯಲಾಗುವುದು. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.
- ಇಲಾಖೆಯಿಂದ ಯಾವುದೇ ವಸ್ತುಗಳನ್ನು ಸರಬರಾಜು ಮಾಡುವುದಿಲ್ಲ. ಕಾಮಗಾರಿಗಳಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟ್ ಇತ್ಯಾದಿಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
- ಅರ್ಜಿದಾರರು ತಮ್ಮ ಗುತ್ತಿಗೆ ನೊಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
- ಗುತ್ತಿಗೆದಾರರು ಕಾಮಗಾರಿ ಮುಕ್ತಾಯಗೊಳಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
- ಗುತ್ತಿಗೆದಾರರು ಸದರಿ ಕಾಮಗಾರಿಯನ್ನು ನಿರ್ವಹಿಸುವ ಆರ್ಥಿಕ ಸಾಮರ್ಥ್ಯದ ಬಗ್ಗೆ ಶೇ 20 ರಷ್ಟು ಕಾಮಗಾರಿಯ ಮೊತ್ತಕ್ಕೆ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಸೂಕ್ತ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು (Line of Credit at 20% of amount put to tender)
- ಗುತ್ತಿಗೆ ಪೆಟ್ಟಿಗೆಗಳನ್ನು ಕೇಂದ್ರ ಕಛೇರಿ ಬೆಂಗಳೂರು, ವೃತ್ತ ಕಛೇರಿ ಶಿವಮೊಗ್ಗ , ಮತ್ತು ವಿಭಾಗ ಕಛೇರಿ ಶಿವಮೊಗ್ಗಗಳಲ್ಲಿ ಇಡಲಾಗುವುದು.
- ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ತೆಗೆದುಕೊಂಡು ಹೋಗುವಾಗ ತಮ್ಮ ರಿಜಿಸ್ಟ್ರೇಷನ್ ಪಾಸ್ ಬುಕ್ಕನ್ನು ಒದಗಿಸಿ ಕೆಲಸದ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು. ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.

ಕಾರ್ಯಪಾಲಕ ಅಭಿಯಂತರರು,
ಶಿವಮೊಗ್ಗ ವಿಭಾಗ, ಶಿವಮೊಗ್ಗ.

ಪಿ.ಆರ್. 23

**FORM - IV**
**(See Rule 12)**
**NOTICE**

It is hereby notified that the undersigned has his / her changed her name from **PRAKASH FIJLAPPA LAMANI** to **PRAKASH FIJLAPPA CHAVAN**

P.D. 10 **PRAKASH FIJLAPPA LAMANI**

**ಪೊಲೀಸ್ ಕಮೀಷನ್‌ರವರ ಕಛೇರಿ, ಬೆಂಗಳೂರು ನಗರ**

**ಟೆಂಡರ್ ಪ್ರಕಟಣೆ ಸಂಖ್ಯೆ: ಸಂಗ್ರಹ-1/163/2006-07, ದಿನಾಂಕ: 18ನೇ ಜನವರಿ 2007**

1. ಸಂಗ್ರಹಣಾ ಸಂಸ್ಥೆ - ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು.
2. ಯೋಜನೆ - ಬೆಂಗಳೂರು ನಗರ ಪೊಲೀಸ್ ಕಮೀಷನರ್ ಘಟಕಕ್ಕೆ ಮೆಗಾ ಸಿಟಿ ಪೊಲೀಸಿಂಗ್ ಸಂಬಂಧ 100 ಸಂಖ್ಯೆ ಸರ್ವಲೆನ್ಸ್ ಕ್ಯಾಮೆರಾಗಳ ಜಾಲ ಮತ್ತು ಅದಕ್ಕೆ ಬೇಕಾಗುವ ಮೂಲಭೂತ ಸಂಪರ್ಕ ಸೌಕರ್ಯಗಳನ್ನು ಅಳವಡಿಸುವ ಬಗ್ಗೆ.

ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ಘಟಕಕ್ಕೆ ಮೆಗಾ ಸಿಟಿ ಪೊಲೀಸಿಂಗ್ ಸಂಬಂಧ 100 ಸಂಖ್ಯೆ ಸರ್ವಲೆನ್ಸ್ ಕ್ಯಾಮೆರಾಗಳ ಜಾಲ ಹಾಗೂ ಸಂಬಂಧಿಸಿದ ಮೂಲಭೂತ ಸಂಪರ್ಕ ಸೌಕರ್ಯಗಳನ್ನು ಅಳವಡಿಸುವ ಸಲುವಾಗಿ ಮೊಹರು ಮಾಡಿರುವ ಟೆಂಡರ್ ಆಹ್ವಾನಿಸಲಾಗಿದೆ.

ಟೆಂಡರ್ ಅರ್ಜಿಗಳನ್ನು ಹಾಗೂ ಸರ್ವಲೆನ್ಸ್ ಕ್ಯಾಮರಾಗಳ ಜಾಲವನ್ನು ಅಳವಡಿಸಲು ಅವಶ್ಯಕತೆಯಿರುವ ನಿರ್ದಿಷ್ಟತೆ/ವಿಶಿಷ್ಟತೆಯನ್ನು ದಿ:22.1.2007 ರಿಂದ 5.2.2007 ರವರೆಗೆ ಪೊಲೀಸ್ ಆಯುಕ್ತರಕ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ರವರಿಂದ ಬೆಳಿಗ್ಗೆ 10-00 ಗಂಟೆಯಿಂದ ಮಧ್ಯಾಹ್ನ 4-00 ಗಂಟೆಯವರೆಗೆ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ.500-00 (Non-refundable) ಹಣವನ್ನು ಡಿ.ಡಿ. ಮೂಲಕ, ಉಪ ಪೊಲೀಸ್ ಕಮೀಷನರ್ (ಆಡಳಿತ), ಬೆಂಗಳೂರು ನಗರ ಇವರ ಹೆಸರಿನಲ್ಲಿ ಪಾವತಿಸಿ ಅರ್ಜಿಯನ್ನು ಪಡೆಯತಕ್ಕದ್ದು, ಭರ್ತಿ ಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಉಪಕರಣದ ಮೌಲ್ಯಕ್ಕೆ ಶೇಕಡ 2 ರಷ್ಟು ಇ.ಎಂ.ಡಿ. ಮುಂಗಡ ಠೇವಣಿಯನ್ನು ಉಪ ಪೊಲೀಸ್ ಕಮೀನರ್ (ಆಡಳಿತ), ಬೆಂಗಳೂರು ನಗರ ರವರ ಪದನಾಮದಲ್ಲಿ ಪಡೆಯತಕ್ಕದ್ದು. ಒಂದು ಲಕೋಟೆಯಲ್ಲಿ ಇ.ಎಂ.ಡಿ. ಡಿ.ಡಿ./ಬ್ಯಾಂಕ್ ಗ್ಯಾರಂಟಿ ಹಾಗೂ ದರಪಟ್ಟಿಗಳ ದಾಖಲಾತಿಯ ವಿವರ ಹಾಗೂ ಮತ್ತೊಂದು ಲಕೋಟೆಯಲ್ಲಿ ಮಾದರಿಯ ಬ್ರೋಚರ್ಸ್, ಕ್ಯಾಟ್‌ಲಾಗ್, ವಿತ್ ಟೆಕ್ನಿಕಲ್ ಸ್ಪೆಸಿಫಿಕೇಶನ್ ಮತ್ತು ಇತರೆ ಸಂಬಂಧಪಟ್ಟ ದಾಖಲೆಗಳನ್ನು ಈ ಕಛೇರಿಯ ಶ್ರೀ ರಾಘವೇಂದ್ರ ಔರಾದ್‌ಕರ್ ಐ.ಪಿ.ಎಸ್, ಅಪರ ಪೊಲೀಸ್ ಕಮೀಷನರ್ (ಆಡಳಿತ) ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ ರವರಿಗೆ ವಿಳಾಸಿಸಿ ದಿ: 5.2.2007 ರಂದು ಮಧ್ಯಾಹ್ನ 5-00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಸ್ವೀಕರಿಸಿದ ಟೆಂಡರ್‌ಗಳನ್ನು ದಿ: 6.2.2007 ರಂದು ಬೆಳಿಗ್ಗೆ 10-00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಹೆಚ್ಚಿನ ವಿರಗಳನ್ನು/ಷರತ್ತುಗಳನ್ನು ಟೆಂಡರ್ ಅರ್ಜಿಯೊಂದಿಗೆ ನೀಡಲಾಗುವುದು.

**ರಾಘವೇಂದ್ರ ಔರಾದ್‌ಕರ್**

ಪಿ.ಆರ್. 27 ಅಪರ ಪೊಲೀಸ್ ಆಯುಕ್ತರು, (ಆಡಳಿತ) ಹಾಗೂ
(ಟೆಂಡರ್ ಆಹ್ವಾನಿಸುವ ಪ್ರಾಧಿಕಾರ) ಬೆಂಗಳೂರು ನಗರ.

**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಅಭಿಯಂತರರವರ ಕಛೇರಿ, ಲೋಕೋಪಯೋಗಿ ವಿಭಾಗ, ಶಿವಮೊಗ್ಗ.**

**ಅಲ್ಪಾವಧಿ ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

**ನಂ:ಕಾ ಅಕ: ಲೋ.ಇ:ವಿಭಾಗ: ಎಇ:ಕಟ್ಟಡ/ಹರಾಜು 2006-07/ 4148 ಶಿವಮೊಗ್ಗ, ದಿನಾಂಕ: 6ನೇ ಜನವರಿ 2007**

ಸಾರ್ವಜನಿಕರಿಗೆ ಈ ಮೂಲಕ ತಿಳಿಸುವುದೇನೆಂದರೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಅಥವಾ ಇವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳಾದ ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ನಂ:1 ಉಪವಿಭಾಗ, ಶಿವಮೊಗ್ಗ ಇವರಿಂದ ಶಿವಮೊಗ್ಗ ನಗರದಲ್ಲಿರುವ ಹಳೇ ಪ್ರಾದೇಶಿಕ ಕಛೇರಿ ಕಟ್ಟಡವನ್ನು ಕೆಡವಿ ಹಾಕಿ ಸಮತಟ್ಟು ಮಾಡುವ ಬಗ್ಗೆ ಕಟ್ಟಡವನ್ನು ಹೇಗಿದೆಯೋ ಹಾಗೇಯೇ ಟೆಂಡರ್ ಕಂ ಬಹಿರಂಗ ಹರಾಜು ಹಾಕಲಾಗುವುದು. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವರು ದಿನಾಂಕ:25.1.2007, 5.30 ಗಂಟೆಯೊಳಗೆ ಠೇವಣಿ ಹಣ ರೂ. 10,000/ (ರೂಪಾಯಿ ಹತ್ತು ಸಾವಿರ ಮಾತ್ರ) ಮುಂಗಡವಾಗಿ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಮ್ಯಾಂಡ್ ಡ್ರಾಫ್ಟ್ ಅನ್ನು ಹಾಗೂ ಟೆಂಡರ್ ಫಾರಂ ಬೆಲೆ ರೂ 300/-+ 12.50% ಬೆಲೆಯನ್ನು ಪಾವತಿಸಿ ಖಾಲಿ ಟೆಂಡರ್ ಫಾರಂನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದು ಹಾಗೂ ಟೆಂಡರ್ ಫಾರಂ ಪಡೆಯದೇ ದಿನಾಂಕ:31.1.2007 ರಂದು ನೇರವಾಗಿ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರೂ ಕೂಡಾ ನೊಂದಣಿ ಶುಲ್ಕ ರೂ. 300+12.50% ತೆರಿಗೆ ಹಾಗೂ ಮುಂಗಡ ಹಣ ರೂ 10,000/ ಗಳಿಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಮ್ಯಾಂಡ್ ಡ್ರಾಫ್ಟ್ ಅನ್ನು ಪ್ರತ್ಯೇಕವಾಗಿ ದಿನಾಂಕ :31.1.2007 ರ ಬೆಳಿಗ್ಗೆ 10.00 ರಿಂದ 12.00 ರೊಳಗೆ ನೀಡಿ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.

**ಹರಾಜು:** ದಿನಾಂಕ:31.1.2007

**ವೇಳೆ:** ಮಧ್ಯಾಹ್ನ 3.00 ಗಂಟೆಯಿಂದ

**ಸ್ಥಳ:** ಹಳೇ ಪ್ರಾದೇಶಿಕ ಕಛೇರಿ, ಕಛೇರಿ ಆವರಣ, ಶಿವಮೊಗ್ಗ.

ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ವಿಭಾಗ, ಶಿವಮೊಗ್ಗ.

**ನಿಭಂದನೆಗಳು ಮತ್ತು ಷರತ್ತುಗಳು:**

1) ಭರ್ತಿ ಮಾಡಿದ ಟೆಂಡರುಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ :27.1.2007 ರಂದು ಸಂಜೆ 4.00 ಗಂಟೆಯೊಳಗಾಗಿ ಸ್ವೀಕರಿಸಲಾಗುವುದು.

2) ಟೆಂಡರ್ ಫಾರಂ ಪಡೆಯದೇ ನೇರವಾಗಿ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ದಿನಾಂಕ:31.1.2007 ರಂದು ಬೆಳಿಗ್ಗೆ 12.00 ಗಂಟೆ ಒಳಗೆ ಮುಂಗಡವಾಗಿ, ಇಡುಗಂಟು ಹಣ ರೂ 10,000.00 ಮತ್ತು ನೊಂದಣಿ ಶುಲ್ಕ ರೂ. 300 + 12.50% ತೆರಿಗೆಯನ್ನು ಕಾರ್ಯಪಾಲಕ

ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಮ್ಯಾಂಡ್ ಡ್ರಾಫ್ಟ್ ಅನ್ನು ಪ್ರತ್ಯೇಕವಾಗಿ ನೀಡಬೇಕು. ನೊಂದಣಿ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

3) ಬಹಿರಂಗವಾಗಿ ಹರಾಜು ಪ್ರಕ್ರಿಯೆ ಪೂರ್ಣಗೊಂಡ ನಂತರ ಸ್ವೀಕರಿಸಲಾದ ಟೆಂಡರನ್ನು ತೆರೆಯಲಾಗುವುದು. ಎರಡೂ ಪ್ರಕ್ರಿಯೆಯಲ್ಲಿನ ಅತೀ ಹೆಚ್ಚಿನ ಮೊತ್ತದ ಬಿಡ್ಡನ್ನು ಪರಿಗಣಿಸಲಾಗುವುದು. ಅತೀ ಹೆಚ್ಚಿನ ಮೊತ್ತದ ಬಿಡ್‌ದಾರರು ಸ್ಥಳದಲ್ಲೇ ಬಿಡ್ ಮೊತ್ತದ 1/3 ಭಾಗವನ್ನು (ಮುಂಗಡ ಹಣ ಒಳಗೊಂಡಂತೆ) + 12.50% ತೆರಿಗೆಯನ್ನು ಡಿ.ಡಿ. ಅಥವಾ ನಗದು ರೂಪದಲ್ಲಿ ಪಾವತಿಸಬೇಕು. ಪಾವತಿಸಲು ವಿಫಲರಾದಲ್ಲಿ ಅವರ ಮುಂಗಡ ಹಣ ರೂ. 10,000.00 ವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ 2ನೇ ಅತಿ ಹೆಚ್ಚಿನ ಮೊತ್ತದ ಬಿಡ್‌ದಾರರಿಗೆ ಅವಕಾಶ ಮಾಡಿಕೊಡಲಾಗುವುದು.

4) ಬಿಡ್ ಅನುಮೋದನೆ ಆದ ನಂತರ ಬಾಕಿ 2/3 ಮೊತ್ತ + 12.50% ತೆರಿಗೆ ಹಣ ಪಾವತಿಸಿ ಕಾರ್ಯಾದೇಶ ಪಡೆದು 20 ದಿನದೊಳಗೆ ಕಟ್ಟಡದ ಉಪಯುಕ್ತ ಮತ್ತು ಅನುಪಯುಕ್ತ ಸಾಮಾಗ್ರಿಗಳನ್ನು ಸ್ಥಳಾಂತರಿಸಿ ತೆರವುಗೊಳಿಸಿ ನಿವೇಶನವನ್ನು ಸಮತಟ್ಟು ಮಾಡತಕ್ಕದ್ದು. ತಪ್ಪಿದಲ್ಲಿ ಮುಂಗಡ ಹಣ ಹಾಗೂ 1/3 ಬಿಡ್ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

5) ಟೆಂಡರುದಾರರು ಬೆಲೆಯನ್ನು ಅಂಕಿಯಲ್ಲಿ ಮತ್ತು ಅಕ್ಷರದಲ್ಲಿಯೂ ಸ್ಪಷ್ಟವಾಗಿ ಬರೆಯತಕ್ಕದ್ದು.

6) ಟೆಂಡರು ಆದ ನಂತರ ಬಾಕಿ ಹಣವನ್ನು ಪ್ರಸ್ತಾವನೆಗೆ ಮೇಲಾಧಿಕಾರಿಗಳಿಂದ ಅನುಮೋದನೆ ಆದ ನಂತರ 5 ದಿನಗೊಳಗಾಗಿ ಪಾವತಿಸಬೇಕು. ಸದರಿ ವಿಷಯವನ್ನು ಪತ್ರಮುಖೇನ ಪ್ರತ್ಯೇಕವಾಗಿ ತಿಳಿಸಲಾಗುವುದು.

7) ಕೆಡವಿದ ನಂತರ ಕಟ್ಟಡಕ್ಕಾಗಿ ಬಳಸಿರುವ ಎಲ್ಲಾ ಸಾಮಾಗ್ರಿಗಳನ್ನು ನಿಯೋಜಿಸಿದ ಅಧಿಕಾರಿಗಳಿಗೆ ತೋರಿಸಿ ತೆಗೆದುಕೊಂಡು ಹೋಗತಕ್ಕದ್ದು.

8) ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ವಿಭಾಗ, ಬಾಲರಾಜ್ ಅರಸು ರಸ್ತೆ, ಶಿವಮೊಗ್ಗ, ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

9) ಟೆಂಡರ್ ಕಂ ಹರಾಜನ್ನು ಯಾವುದೇ ಕಾರಣ ನೀಡದೇ ಅಂಗೀಕರಿಸುವ ಹಾಗೂ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಳ್ಳಲಾಗಿದೆ.

10) ಕಟ್ಟಡವನ್ನು ಕೆಡುವುವಾಗ ನಿಧಿ, ಹಣ ವಗೈರೆ ದೊರತಲ್ಲಿ ಸದರಿ ವಿಷಯವನ್ನು ಅಧಿಕಾರಿಗಳ ಗಮನಕ್ಕೆ ಕೂಡಲೇ ತರುವುದು.

11) ಟೆಂಡರ್ ಕಂ ಹರಾಜಿನಲ್ಲಿ ಅಯಶಸ್ವಿಯಾದ ಬಿಡ್‌ದಾರರಿಗೆ/ಟೆಂಡರ್‌ದಾರರಿಗೆ ಮುಂಗಡ ಹಣವನ್ನು ಹಿಂದಿರುಗಿಸಲಾಗುವುದು. ಟೆಂಡರ್ ಫಾರಂ ಬೆಲೆಯನ್ನು ಹಿಂದುರಿಗಿಸಲಾಗುವುದಿಲ್ಲ.

12) ಅಂಗೀಕೃತ ಬಿಡ್‌ದಾರರು/ಟೆಂಡರ್‌ದಾರರು ಬಿಡ್ ಮೊತ್ತ/ ಟೆಂಡರ್ ಮೊತ್ತದ ಮೇಲೆ ನಿಯಮದ ಪ್ರಕಾರ ವಿಧಿಸುವ ತೆರಿಗೆ (ವ್ಯಾಟ್) ಯನ್ನು ಭರಿಸಬೇಕು.

13) ಹರಾಜಿನಲ್ಲಿ ಉದ್ಭವವಾಗುವ ಯಾವುದೇ ವಿವಾದಗಳಿಗೆ ಅಧೀಕ್ಷಕ ಅಭಿಯಂತರರು. ಶಿವಮೊಗ್ಗ ವೃತ್ತ ಶಿವಮೊಗ್ಗ ಇವರ ತೀರ್ಮಾನವೇ ಅಂತಿಮವಾಗಿರುತ್ತದೆ ಹಾಗೂ ಈ ತೀರ್ಪಿನ ಮೇಲೆ ಯಾವುದೇ ಮೇಲ್ಮನವಿಯನ್ನು ಮಾನ್ಯ ಮಾಡುವುದಿಲ್ಲ.

14) ಕಾರ್ಯಪಾಲಕ ಅಭಿಯಂತರು, ಶಿವಮೊಗ್ಗ ವಿಭಾಗ ಶಿವಮೊಗ್ಗ ಇವರು ಟೆಂಡರ್ ಕಂ ಬಹಿರಂಗ ಹರಾಜನ್ನು ಯಾವುದೇ ಕಾರಣ ನೀಡದೇ ಮುಂದೂಡಲು ಅಥವಾ ನಿಲ್ಲಿಸುವ ಹಕ್ಕುನ್ನು ಕಾಯ್ದಿರಿಸಿ ಕೊಂಡಿರುತ್ತಾರೆ.

ಪಿ.ಆರ್. 20 ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ವಿಭಾಗ, ಶಿವಮೊಗ್ಗ.

**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ವಿಭಾಗ, ಶಿವಮೊಗ್ಗ.**

**ಅಲ್ಪಾವಧಿ ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

**ನಂ:ಕಾ ಅಕ: ಲೋ. ಇ:ವಿಭಾಗ: ಎಇ:ಕಟ್ಟಡ/ಹರಾಜು 2006-07/ 4152 ಶಿವಮೊಗ್ಗ, ದಿನಾಂಕ: 6ನೇ ಜನವರಿ 2007**

ಸಾರ್ವಜನಿಕರಿಗೆ ಈ ಮೂಲಕ ತಿಳಿಸುವುದೇನೆಂದರೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಅಥವಾ ಇವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳಾದ ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ನಂ:1 ಉಪವಿಭಾಗ, ಶಿವಮೊಗ್ಗ ಇವರಿಂದ ಶಿವಮೊಗ್ಗ ನಗರದಲ್ಲಿರುವ ಹಳೇ ಜಿಲ್ಲಾಧಿಕಾರಿಗಳ ಕಛೇರಿ ಕಟ್ಟಡವನ್ನು ಕೆಡವಿ ಹಾಕಿ ಸಮತಟ್ಟು ಮಾಡುವ ಬಗ್ಗೆ ಕಟ್ಟಡವನ್ನು ಹೇಗಿದೆಯೋ ಹಾಗೇಯೇ ಟೆಂಡರ್ ಕಂ ಬಹಿರಂಗ ಹರಾಜು ಹಾಕಲಾಗುವುದು. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲಿಚ್ಚಿಸುವರು ದಿನಾಂಕ:25.1.2007, 5.30 ಗಂಟೆಯೊಳಗೆ ಠೇವಣಿ ಹಣ ರೂ. 1,70,000/- (ರೂಪಾಯಿ ಒಂದು ಲಕ್ಷ ಎಪ್ಪತ್ತು ಸಾವಿರ ಮಾತ್ರ) ಮುಂಗಡವಾಗಿ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್ ನಿಂದ ಪಡೆದ ಡಿಮಾಂಡ್ ಡ್ರಾಫ್ಟ್ ಅನ್ನು ಹಾಗೂ ಟೆಂಡರ್ ಫಾರಂ ಬೆಲೆ ರೂ 1,000/-+ 12.50% ತೆರಿಗೆ ಬೆಲೆಯನ್ನು ಪಾವತಿಸಿ ಖಾಲಿ ಟೆಂಡರ್ ಫಾರಂನ್ನು ಕಛೇರಿ ವೇಳೆಯಲ್ಲಿ ಪಡೆಯಬಹುದು ಹಾಗೂ ಟೆಂಡರ್ ಫಾರಂ ಪಡೆಯದೇ ದಿನಾಂಕ :29.1.2007 ರಂದು ನೇರವಾಗಿ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರೂ ಕೂಡಾ ನೊಂದಣಿ ಶುಲ್ಕ ರೂ. 1,000+12.50% ತೆರಿಗೆ ಹಾಗೂ ಮುಂಗಡ ಹಣ ರೂ 1,70,000/- ಗಳಿಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಮಾಂಡ್ ಡ್ರಾಫ್ಟ್ ಅನ್ನು ಪ್ರತ್ಯೇಕವಾಗಿ ದಿನಾಂಕ :29.1.2007 ರ ಬೆಳಿಗ್ಗೆ 10.00 ರಿಂದ 12.00 ರೊಳಗೆ ನೀಡಿ ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು.

**ಹರಾಜು ದಿನಾಂಕ:** 29.1.2007

**ವೇಳೆ:** ಮಧ್ಯಾಹ್ನ 3.00 ಗಂಟೆಯಿಂದ

**ಸ್ಥಳ :** ಹಳೇ ಜಿಲ್ಲಾಧಿಕಾರಿಗಳ ಕಛೇರಿ ಆವರಣ, ಶಿವಮೊಗ್ಗ.

ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ವಿಭಾಗ, ಶಿವಮೊಗ್ಗ.

**ನಿಭಂದನೆಗಳು ಮತ್ತು ಷರತ್ತುಗಳು:**

1) ಭರ್ತಿ ಮಾಡಿದ ಟೆಂಡರುಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ :27.1.2007 ರಂದು ಸಂಜೆ 4.00 ಗಂಟೆಯೊಳಗಾಗಿ ಸ್ವೀಕರಿಸಲಾಗುವುದು.

2) ಟೆಂಡರ್ ಫಾರಂ ಪಡೆಯದೇ ನೇರವಾಗಿ ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ದಿನಾಂಕ:29.1.2007 ರಂದು ಬೆಳಿಗ್ಗೆ 12.00 ಗಂಟೆ ಒಳಗೆ ಮುಂಗಡವಾಗಿ, ಇಡುಗಂಟು ಹಣ ರೂ 1,70,000-00 ಮತ್ತು ನೊಂದಣಿ ಶುಲ್ಕ ರೂ. 1,000 + 12.50% ತೆರಿಗೆಯನ್ನು ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಡಿಮ್ಯಾಂಡ್ ಡ್ರಾಫ್ಟ್ ಅನ್ನು ಪ್ರತ್ಯೇಕವಾಗಿ ನೀಡಬೇಕು. ನೊಂದಣಿ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

3) ಬಹಿರಂಗವಾಗಿ ಹರಾಜು ಪ್ರಕ್ರಿಯೆ ಪೂರ್ಣಗೊಂಡ ನಂತರ ಸ್ವೀಕರಿಸಲಾದ ಟೆಂಡರನ್ನು ತೆರೆಯಲಾಗುವುದು. ಎರಡೂ ಪ್ರಕ್ರಿಯೆಯಲ್ಲಿನ ಅತೀ ಹೆಚ್ಚಿನ ಮೊತ್ತದ ಬಿಡ್ಡನ್ನು ಪರಿಗಣಿಸಲಾಗುವುದು. ಅತೀ ಹೆಚ್ಚಿನ ಮೊತ್ತದ ಬಿಡ್ ದಾರರು ಸ್ಥಳದಲ್ಲೇ ಬಿಡ್ ಮೊತ್ತದ 1/3 ಭಾಗವನ್ನು (ಮುಂಗಡ ಹಣ ಒಳಗೊಂಡಂತೆ) + 12.50% ತೆರಿಗೆಯನ್ನು ಡಿ.ಡಿ. ಅಥವಾ ನಗದು ರೂಪದಲ್ಲಿ ಪಾವತಿಸಬೇಕು. ಪಾವತಿಸಲು ವಿಫಲರಾದಲ್ಲಿ ಅವರ ಮುಂಗಡ ಹಣ ರೂ. 1,70,000.00 ವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ 2ನೇ ಅತಿ ಹೆಚ್ಚಿನ ಮೊತ್ತದ ಬಿಡ್‌ದಾರರಿಗೆ ಅವಕಾಶ ಮಾಡಿಕೊಡಲಾಗುವುದು.

4) ಬಿಡ್ ಅನುಮೋದನೆ ಆದ ನಂತರ ಬಾಕಿ 2/3 ಮೊತ್ತ +12.50% ತೆರಿಗೆ ಹಣ ಪಾವತಿಸಿ ಕಾರ್ಯಾದೇಶ ಪಡೆದು 30 ದಿನದೊಳಗೆ ಕಟ್ಟಡದ ಉಪಯುಕ್ತ ಮತ್ತು ಅನುಪಯುಕ್ತ ಸಾಮಾಗ್ರಿಗಳನ್ನು ಸ್ಥಳಾಂತರಿಸಿ ತೆರವುಗೊಳಿಸಿ ನಿವೇಶನವನ್ನು ಸಮತಟ್ಟು ಮಾಡತಕ್ಕದ್ದು. ತಪ್ಪಿದಲ್ಲಿ ಮುಂಗಡ ಹಣ ಹಾಗೂ 1/3 ಬಿಡ್ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

5) ಟೆಂಡರುದಾರರು ಬೆಲೆಯನ್ನು ಅಂಕಿಯಲ್ಲಿ ಮತ್ತು ಅಕ್ಷರದಲ್ಲಿಯೂ ಸ್ಪಷ್ಟವಾಗಿ ಬರೆಯತಕ್ಕದ್ದು.

6) ಟೆಂಡರು ಆದ ನಂತರ ಬಾಕಿ ಹಣವನ್ನು ಪ್ರಸ್ತಾವನೆಗೆ ಮೇಲಾಧಿಕಾರಿಗಳಿಂದ ಅನುಮೋದನೆ ಆದ ನಂತರ 7 ದಿನಗೊಳಗಾಗಿ ಪಾವತಿಸಬೇಕು. ಸದರಿ ವಿಷಯವನ್ನು ಪತ್ರಮುಖೇನ ಪ್ರತ್ಯೇಕವಾಗಿ ತಿಳಿಸಲಾಗುವುದು.

7) ಕೆಡವಿದ ನಂತರ ಕಟ್ಟಡಕ್ಕಾಗಿ ಬಳಸಿರುವ ಎಲ್ಲಾ ಸಾಮಾಗ್ರಿಗಳನ್ನು ನಿಯೋಜಿಸಿದ ಅಧಿಕಾರಿಗಳಿಗೆ ತೋರಿಸಿ ತೆಗೆದುಕೊಂಡು ಹೋಗತಕ್ಕದ್ದು.

8) ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ವಿಭಾಗ, ಬಾಲರಾಜ್ ಅರಸು ರಸ್ತೆ, ಶಿವಮೊಗ್ಗ, ಇವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

9) ಟೆಂಡರ್ ಕಂ ಹರಾಜನ್ನು ಯಾವುದೇ ಕಾರಣ ನೀಡದೇ ಅಂಗೀಕರಿಸುವ ಹಾಗೂ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಳ್ಳಲಾಗಿದೆ.

10) ಕಟ್ಟಡವನ್ನು ಕೆಡುವುವಾಗ ನಿಧಿ, ಹಣ ವಗೈರೆ ದೊರೆತಲ್ಲಿ ಸದರಿ ವಿಷಯವನ್ನು ಅಧಿಕಾರಿಗಳ ಗಮನಕ್ಕೆ ಕೂಡಲೇ ತರುವುದು.

11) ಟೆಂಡರ್ ಕಂ ಹರಾಜಿನಲ್ಲಿ ಅಯಶಸ್ವಿಯಾದ ಬಿಡ್‌ದಾರರಿಗೆ/ಟೆಂಡರ್‌ದಾರರಿಗೆ ಮುಂಗಡ ಹಣವನ್ನು ಹಿಂದಿರುಗಿಸಲಾಗುವುದು. ಟೆಂಡರ್ ಫಾರಂ ಬೆಲೆಯನ್ನು ಹಿಂದಿರುಗಿಸಲಾಗುವುದಿಲ್ಲ.

12) ಅಂಗೀಕೃತ ಬಿಡ್ ದಾರರು/ಟೆಂಡರ್‌ದಾರರು ಬಿಡ್ ಮೊತ್ತ/ ಟೆಂಡರ್ ಮೊತ್ತದ ಮೇಲೆ ನಿಯಮದ ಪ್ರಕಾರ ವಿಧಿಸುವ ತೆರಿಗೆ (ವ್ಯಾಟ್) ಯನ್ನು ಭರಿಸಬೇಕು.

13) ಹರಾಜಿನಲ್ಲಿ ಉದ್ಭವವಾಗುವ ಯಾವುದೇ ವಿವಾದಗಳಿಗೆ ಅಧೀಕ್ಷಕ ಅಭಿಯಂತರು. ಶಿವಮೊಗ್ಗ ವೃತ್ತ ಶಿವಮೊಗ್ಗ ಇವರ ತೀರ್ಮಾನವೇ ಅಂತಿಮವಾಗಿರುತ್ತದೆ ಹಾಗೂ ಈ ತೀರ್ಪಿನ ಮೇಲೆ ಯಾವುದೇ ಮೇಲ್ಮನವಿಯನ್ನು ಮಾನ್ಯ ಮಾಡುವುದಿಲ್ಲ.

14) ಕಾರ್ಯಪಾಲಕ ಅಭಿಯಂತರರು, ಶಿವಮೊಗ್ಗ ವಿಭಾಗ ಶಿವಮೊಗ್ಗ ಇವರು ಟೆಂಡರ್ ಕಂ ಬಹಿರಂಗ ಹರಾಜನ್ನು ಯಾವುದೇ ಕಾರಣ ನೀಡದೇ ಮುಂದೂಡಲು ಅಥವಾ ನಿಲ್ಲಿಸುವ ಹಕ್ಕುನ್ನು ಕಾಯ್ದಿರಿಸಿಕೊಂಡಿರುತ್ತಾರೆ.

ಕಾರ್ಯಪಾಲಕ ಇಂಜಿನಿಯರ್,
ಲೋಕೋಪಯೋಗಿ ಇಲಾಖೆ ವಿಭಾಗ, ಶಿವಮೊಗ್ಗ.

ಪಿ.ಆರ್. 21

## ಲೋಕೋಪಯೋಗಿ ಇಲಾಖೆ, ಕೋಲಾರ ವಿಭಾಗ, ಕೋಲಾರ

### ಬಾಬುವಾರ ದರದ ಟೆಂಡರುಗಳಿಗಾಗಿ ಅರ್ಜಿ ಆಹ್ವಾನ (1ನೇ ಕರೆ)

### ಟೆಂಡರ್ ಅಧಿಸೂಚನಾ ಸಂಖ್ಯೆ: 44 : 2006-07, ದಿನಾಂಕ: 28ನೇ ಡಿಸೆಂಬರ್ 2006

ಈ ಕೆಳಗೆ ತಿಳಿಸಿದ ಕಾಮಗಾರಿಗಾಗಿ ನಿರ್ದಿಷ್ಟ ಪಡಿಸಿದ ನಮೂನೆಗಳನ್ನು ನೊಂದಾಯಿತ ಕರಾರುದಾರರಿಂದ ದ್ವಿಪ್ರತಿಗಳಲ್ಲಿ ಮೊಹರು ಮಾಡಲಾದ ಟೆಂಡರ್‌ಗಳನ್ನು ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ರ ಅನ್ವಯ ಈ ಕೆಳಗೆ ಸಹಿ ಮಾಡಿದವರು ಕರೆದಿರುತ್ತಾರೆ. ಅವುಗಳನ್ನು ಈ ಕೆಳಗೆ ಸಹಿ ಮಾಡಿದವರು ತಮ್ಮ ಕಛೇರಿಯಲ್ಲಿ ಆ ಕಾಮಗಾರಿ ಪ್ರತಿಯೊಂದು ಕಾಮಗಾರಿಯೆದುರು ನಮೂದಿಸಿದ ದಿನಾಂಕಗಳಂದು ಸಂಜೆ 4-00 ಗಂಟೆಯವರೆಗೆ ಸ್ವೀಕರಿಸುತ್ತಾರೆ. ಆ ಟೆಂಡರುಗಳನ್ನು ಈ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ದಿನಾಂಕ 9.02.2007 ರಂದು ಸಂಜೆ 4.30 ಗಂಟೆಗೆ ಸಾಧ್ಯವಾದರೆ ತೆರೆಯಲಾಗುವುದು.

ಕಾಮಗಾರಿಗೆ : ಪ್ರತಿಯೊಂದು ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ಕರಾರು ದಾಸ್ತಾವೇಜುಗಳು ಅಂದರೆ ರೇಖಾ ಚಿತ್ರಗಳು ಪೂರ್ಣ ತಂಡ ಮಾಡಬೇಕಾದ ಕಾಮಗಾರಿಗಳ ಪೂರ್ಣ ತಪಶೀಲು ಮಾಡಬೇಕಾದ ಕಾಮಗಾರಿಗಳ ವಿವಿಧ ವರ್ಗಗಳ ಪರಿಮಾಣದ ಷೆಡ್ಯೂಲ್ ಅಗತ್ಯವಿರುವಲ್ಲಿ ಕಲ್ಲುಗಣಿ ಚಾರ್ಟುಗಳು ಮತ್ತು ಯಾರ ಟೆಂಡರು ಸ್ವೀಕೃತವಾಗುತ್ತದೋ ಆ ವ್ಯಕ್ತಿಯು ಮಾಡಬೇಕಾದ ಕರಾರಿನ ಷರತ್ತುಗಳು ಇವುಗಳನ್ನು ಅದಕ್ಕಾಗಿ ಅರ್ಜಿ ಸಲ್ಲಿಸಿ ಟೆಂಡರ್ ದಾಖಲೆಗಳ ಬಿಲ್ಲನ್ನು ಸಂದಾಯ ಮಾಡಿದ ತರುವಾಯ ಅವುಗಳಲ್ಲಿ ಕಾಮಗಾರಿಯ ಎದುರು ಹೇಳಲಾದ ದಿನಾಂಕದಂದು ಕೆಲಸದ ದಿನಗಳಿಂದ ಕಛೇರಿ ವೇಳೆಯಲ್ಲಿ ಖರೀದಿಸಬಹುದು. ಇದಲ್ಲದೇ ಕರಾರುದಾರರು ಸದ್ಯದಲ್ಲಿ ತಾವು ಕಾರ್ಯನಿರ್ವಹಿಸುತ್ತಿರುವಂತಹ ಕಾಮಗಾರಿಗಳ ಒಂದು ಪಟ್ಟಿಯನ್ನು ಈ ಕೆಳಗೆ ಸಹಿ ಹಾಕಿದವರ ಮಾಹಿತಿಗಾಗಿ ಸಲ್ಲಿಸಬೇಕೆಂದು ಕೋರಲಾಗಿದೆ.

ಟೆಂಡರು ಸಲ್ಲಿಸಬಯಸುವ ಕರಾರುದಾರರು ಟೆಂಡರ್ ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಒಳಗೊಂಡ ವಿವರವಾದ ಸೂಚನೆಗಳು ಮತ್ತು ಷರತ್ತುಗಳನ್ನು ತಪ್ಪದೇ ಪಾಲಿಸಬೇಕೆಂಬುದನ್ನು ಗಮನಿಸಬೇಕು. ಇದರ ನೋಟೀಸು ಅವರು ಕೊಂಡುಕೊಳ್ಳುವ ಟೆಂಡರ್ ದಾಖಲೆಗಳ ಒಂದು ಭಾಗವಾಗಿರುತ್ತದೆ. ಸಂಚಕಾರ ಠೇವಣಿಯ ಮೊಬಲಗು, ನಮೂನೆ ಹಾಗೂ ಸಿಂಧುತ್ವ ಅವಧಿಯ ಸಂಬಂಧಪಟ್ಟ ವಿವರಗಳು ಟೆಂಡರ್‌ಗಳನ್ನು ಸಲ್ಲಿಸುವಾಗ ಮತ್ತು ಟೆಂಡರು ದಸ್ತಾವೇಜುಗಳನ್ನು ಭರ್ತಿ ಮಾಡುವಾಗ ಕರಾರುದಾರರು ಅನುಸರಿಸಬೇಕಾದ ಕಾರ್ಯವಿಧಾನ, ನೀಡಿಕೆ ಆಹ್ವಾನದ ಅವಧಿಯ ಸಿಂಧುತ್ವ, ಟೆಂಡರುಗಳನ್ನು ತೆಗೆಯುವುದು, ತಪ್ಪುಗಳನ್ನು ದೋಷಗಳನ್ನು ಸರಿಪಡಿಸುವಿಕೆ ಕೆಲವು ಸಂದರ್ಭಗಳಲ್ಲಿ ಮೌಲ್ಯ ನಿರ್ಧರಣೆ ಪದ್ಧತಿ, ಕರಾರುದಾರರು ಬಾಕೀದಾರರಾದಾಗ ಪರಿಣಾಮಗಳು ಯಶಸ್ವಿ ಟೆಂಡರುದಾರರಿಂದ ಸಂದಾಯ ಮಾಡಬೇಕಾದ ಭದ್ರತಾ ಠೇವಣಿ ಬೆಲೆ ಹೊಂದಾಣಿಕೆ ಇತ್ಯಾದಿಗಳು ಸಹಾ ಟೆಂಡರು ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಲಭ್ಯವಿರುತ್ತದೆ.

ಕರಾರುದಾರರಿಗೆ ಹೆಚ್ಚಿನ ವಿವರಗಳೇನಾದರೂ ಅಗತ್ಯವಿದ್ದಲ್ಲಿ ಅದನ್ನು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿಯಿಂದ ನಮೂದಿಸಿರುವ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು. ಈ ಕೆಳಗೆ ನಮೂದಿಸಲಾದ ಯಾವುದೇ ದಿನಾಂಕಗಳು ಸಾರ್ವತ್ರಿಕ ರಜಾ ದಿನಗಳಾಗಿರುವಲ್ಲಿ ಆ ದಿನಾಂಕಕ್ಕೆ ಬದಲಾಗಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದೆಂದು ಸೂಚಿಸಲಾಗಿದೆ.

**ಸೂಚನೆ :**

1) ಇ.ಎಂ.ಡಿ.ಯನ್ನು ಕರ್ನಾಟಕ ಸರ್ಕಾರದ ಟ್ರೆಜರಿ ಚಲನ್, ಡಿಮ್ಯಾಂಡ್ ಡ್ರಾಫ್ಟ್, ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟ್ ರೂಪದಲ್ಲಿ ಸೂಚಿಸಿರುವ ಹಣಕ್ಕೆ ತಕ್ಕಂತೆ ಕಾರ್ಯನಿರ್ವಾಹಕ ಇಂಜಿನಿಯರ್, ಕೋಲಾರ ವಿಭಾಗ, ಸಂಪರ್ಕ ಮತ್ತು ಕಟ್ಟಡಗಳು, ಕೋಲಾರ, ಇವರ ಹೆಸರಿನಲ್ಲಿ ಪಾವತಿ ಮಾಡುವುದು.
2) ಯಾವುದೇ ನಿಬಂಧನೆಗಳನ್ನೊಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
3) ಠೇವಣಿ ಕ್ರಮಬದ್ಧತೆಯ (ವ್ಯಾಲಿಡಿಟಿ ಪೀರಿಯಡ್) ತೊಂಬತ್ತು ದಿವಸಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
4) ಅಂದಾಜು ಮೊತ್ತ ಹೆಚ್ಚುವರಿಯಾದಲ್ಲಿ ಇ.ಎಂ.ಡಿ. ವ್ಯತ್ಯಾಸದ ಮೊತ್ತವನ್ನು ಯಶಸ್ವಿ ಟೆಂಡರುದಾರರು ಕರಾರು ಮುಚ್ಚಳಿಕೆ ಸಮಯದಲ್ಲಿ ಪಾವತಿ ಮಾಡಬೇಕು.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡರ್‌ಗಿಟ್ಟ ಮೊತ್ತ ರೂ. ಲಕ್ಷಗಳಲ್ಲಿ | ಇ.ಎಂ.ಡಿ. ರೂ. | ಟೆಂಡರ್ ದಾಖಲೆಗಳ ವೆಚ್ಚ (ಈ ಹಣವನ್ನು ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ | ಕರಾರುದಾರರ ವರ್ಗ | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು | ಸಂಜೆ 5.30 ವರೆಗೆ ಅರ್ಜಿ ಸ್ವೀಕಾರದ ಕಡೆಯ ದಿನಾಂಕ | ಸಂಜೆ 5.30 ವರೆಗೆ ಟೆಂಡರ್ ದಾಖಲೆಗಳನ್ನು ನೀಡುವ ಕಡೆಯ ದಿನಾಂಕ | ಸಂಜೆ 4.00 ಗಂಟೆವರೆಗೆ ಟೆಂಡರ್‌ಗಳನ್ನು ಸ್ವೀಕರಿಸುವ ಕಡೆಯ ದಿನಾಂಕ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಕೋಲಾರ ಜಿಲ್ಲೆ, ಬಂಗಾರಪೇಟೆ ತಾ. ಕೆ.ಜಿ.ಎಫ್. ನಗರದ ನ್ಯಾಯಾಲಯ ಕಟ್ಟಡಕ್ಕೆ ಮೊದಲನೇ ಅಂತಸ್ತು ಕಟ್ಟಡ ನಿರ್ಮಾಣ ಕಾಮಗಾರಿ. | 45.00 | 45000.00 | ರೂ. 5000.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 2 | ಕೋಲಾರ ಜಿಲ್ಲೆ, ಚಿಂತಾಮಣಿ ನಗರದಲ್ಲಿರುವ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡ ನವೀಕರಣ ಕಾಮಗಾರಿ | 45.00 | 45000.00 | ರೂ. 4500.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 3 | ಕೋಲಾರ ಜಿಲ್ಲೆ, ಶಿಡ್ಲಘಟ್ಟ ಪಟ್ಟಣದಲ್ಲಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡಕ್ಕೆ ಮೊದಲನೇ ಅಂತಸ್ತು ಕಟ್ಟಡ ನಿರ್ಮಾಣ ಕಾಮಗಾರಿ | 45.00 | 45000.00 | ರೂ. 4500.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 4 | ಕೋಲಾರ ಜಿಲ್ಲೆ, ಗೌರಿಬಿದನೂರು ಪಟ್ಟಣದಲ್ಲಿ ಅಗ್ನಿಶಾಮಕ ಠಾಣೆ ನಿರ್ಮಾಣ ಕಾಮಗಾರಿ | 45.00 | 45000.00 | ರೂ. 4500.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 5 | ಕೋಲಾರ ಜಿಲ್ಲೆ, ಕೋಲಾರ ತಾ. ನರಸಾಪುರ ಗ್ರಾಮದಲ್ಲಿ ಸರ್ಕಾರಿ ಪದವಿಪೂರ್ವ ಕಾಲೇಜು ಕಟ್ಟಡ ನಿರ್ಮಾಣ ಕಾಮಗಾರಿ | 36.00 | 36000.00 | ರೂ. 3500.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 6 | ಕೋಲಾರ ಜಿಲ್ಲೆ, ಗೌರಿಬಿದನೂರು ಪಟ್ಟಣದ ಜೆ.ಎಂ.ಎಫ್.ಸಿ. ನ್ಯಾಯಾಲಯ ಕಟ್ಟಡಕ್ಕೆ ಅಭಿವೃದ್ಧಿ ಹಾಗೂ ಶೌಚಾಲಯ ನಿರ್ಮಾಣ ಕಾಮಗಾರಿ | 27.00 | 27000.00 | ರೂ. 3000.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 7 | ಕೋಲಾರ ಜಿಲ್ಲೆ, ಗುಡಿಬಂಡೆ ಪಟ್ಟಣದಲ್ಲಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡಕ್ಕೆ ಹೆಚ್ಚುವರಿ ಕೊಠಡಿಗಳ ನಿರ್ಮಾಣ ಕಾಮಗಾರಿ | 27.00 | 27000.00 | ರೂ. 3000.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 8 | ಕೋಲಾರ ಜಿಲ್ಲೆ, ಶ್ರೀನಿವಾಸಪುರ ಪಟ್ಟಣದಲ್ಲಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡಕ್ಕೆ ಹೆಚ್ಚುವರಿ ಕೊಠಡಿಗಳ ನಿರ್ಮಾಣ ಕಾಮಗಾರಿ. | 27.00 | 27000.00 | ರೂ. 3000.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 9 | ಕೋಲಾರ ಜಿಲ್ಲೆ, ಮುಳಬಾಗಿಲು ಪಟ್ಟಣದಲ್ಲಿ ಅಗ್ನಿಶಾಮಕ ಠಾಣೆ ನಿರ್ಮಾಣ ಕಾಮಗಾರಿ | 27.00 | 27000.00 | ರೂ. 3000.00 + ಇತರೆ ತೆರಿಗೆಗಳು | 1ನೇ ದರ್ಜೆ | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| 10 | ಕೋಲಾರ ಜಿಲ್ಲೆ, ಬಂಗಾರುಪೇಟೆ ಪಟ್ಟಣದಲ್ಲಿ ಉಪನೋಂದಣಾಧಿಕಾರಿಗಳ ಕಚೇರಿ ಕಟ್ಟಡ ನಿರ್ಮಾಣ ಕಾಮಗಾರಿ | 18.00 | 27000.00 | ರೂ. 2500.00 + ಇತರೆ ತೆರಿಗೆಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 11 | ಕೋಲಾರ ಜಿಲ್ಲೆ, ಬಂಗಾರುಪೇಟೆ ಪಟ್ಟಣದಲ್ಲಿರುವ ಸರ್ಕಾರಿ ಪದವಿಪೂರ್ವ ಬಾಲಕರ ಕಾಲೇಜ ಕಟ್ಟಡಕ್ಕೆ ಹೆಚ್ಚುವರಿ ಕೊಠಡಿಗಳ ನಿರ್ಮಾಣ ಕಾಮಗಾರಿ | 14.00 | 21000.00 | ರೂ. 1500.00 + ಇತರೆ ತೆರಿಗೆಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |
| 12 | ಕೋಲಾರ ಜಿಲ್ಲೆ, ಬಂಗಾರುಪೇಟೆ ಪಟ್ಟಣದಲ್ಲಿರುವ ಸರ್ಕಾರಿ ಪದವಿಪೂರ್ವ ಬಾಲಕಿಯರ ಕಾಲೇಜು ಕಟ್ಟಡಕ್ಕೆ ಹೆಚ್ಚುವರಿ ಕೊಠಡಿಗಳ ನಿರ್ಮಾಣ ಕಾಮಗಾರಿ | 14.00 | 21000.00 | ರೂ. 1500.00 + ಇತರೆ ತೆರಿಗೆಗಳು | 2ನೇ ದರ್ಜೆ ಮತ್ತು ಮೇಲ್ಪಟ್ಟು | 12 ತಿಂಗಳು | 28.12.2006 ರಿಂದ 31.1.2007 | 6.2.2007 | 9.2.2007 |

**ಭರ್ತಿಮಾಡಿದ ಟೆಂಡರ್ ಗಳೊಂದಿಗೆ ಗುತ್ತಿಗೆದಾರರು ಸಲ್ಲಿಸಬೇಕಾಗಿರುವ ದಾಖಲೆಗಳು**

1. ಈ ಮೇಲಿನ ಕಟ್ಟಡ ಕಾಮಗಾರಿಯ ಮಾದರಿಯ ಒಂದು ಕಾಮಗಾರಿಯನ್ನು ಟೆಂಡರ್‌ಗೆ ಹಾಕಿರುವ ಮೌಲ್ಯಕ್ಕೆ ಶೇಕಡ 30% ಕಡಿಮೆ ಇರದ ಮೌಲ್ಯದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯಲ್ಲಿ ಒಂದು ಆರ್ಥಿಕ ವರ್ಷದ ಅವಧಿಯಲ್ಲಿ ತೃಪ್ತಿಕರವಾಗಿ ಪೂರೈಸಿರುವುದರ ಬಗ್ಗೆ ಕಾರ್ಯನಿರ್ವಾಹಕ ಇಂಜನೀಯರ್ ದರ್ಜೆಗೆ ಕಡಿಮೆಯಿರದ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದ ಯೋಗ್ಯತಾ ಪತ್ರವನ್ನು ಗುತ್ತಿಗೆದಾರರ ಟೆಂಡರ್ ಜೊತೆಗೆ ಹಾಜರುಪಡಿಸಬೇಕು, ಹಾಗೆ ಮಾಡಲು ವಿಫಲರಾದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.

2. ನಿಗದಿತ ಇ.ಎಂ.ಡಿ. ಯನ್ನು ಈ ಕೆಳಗೆ ಸೂಚಿಸಿರುವವರಿಗೆ ಡಿಮ್ಯಾಂಡ್ ಡ್ರಾಫ್ಟ್ ದ್ವಿಪ್ರತಿಯಲ್ಲಿ ಟ್ರೆಜರಿ ಚಲನನ್ನು ಅಥವಾ ಎನ್.ಎಸ್.ಸಿ ಬ್ಯಾಂಕ್ ಗ್ಯಾರಂಟಿಗಳನ್ನು ಈ ಕೆಳಗೆ ಸಹಿ ಮಾಡಿರುವವರಿಗೆ ಪಾವತಿಯಾಗುವಂತೆ ಪ್ಲೆಡ್ಜ ಮಾಡಿ ಟೆಂಡರ್‌ನೊಂದಿಗೆ ಸಲ್ಲಿಸುವುದು ಹಾಗೆ ಮಾಡಲು ತಪ್ಪಿದಲ್ಲಿ ಟೆಂಡರ್ ಅನ್ನು ತಿರಸ್ಕರಿಸಲಾಗುವುದು.

3. ಗುತ್ತಿಗೆದಾರರು ನೊಂದಾಣಿ ಮತ್ತು ನವೀಕರಣ ಪ್ರಮಾಣ ಪತ್ರದ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಯಿಂದ ಕ್ರಮವಾಗಿ ಪ್ರಮಾಣೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

4. ಗುತ್ತಿಗೆದಾರರು ನಿರ್ವಹಿಸಿ ತೃಪ್ತಿಕರವಾಗಿ ಪೂರ್ಣಗೊಳಿಸಿರುವ ಕಾಮಗಾರಿಗಳ ಯೋಗ್ಯತಾ ಪ್ರಮಾಣ ಪತ್ರವನ್ನು ಸಹಾಯಕ ಕಾರ್ಯನಿರ್ವಾಹಕ ಇಂಜನೀಯರ್ ಅಥವಾ ಕಾರ್ಯನಿರ್ವಾಹಕ ಇಂಜನಿಯರ್‌ರವರಿಂದ ದೃಡೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

**ಟೆಂಡರ್ ಫಾರಂಗಳಿಗಾಗಿ ಮಾನವಿ ಸಲ್ಲಿಸುವ ಗುತ್ತಿಗೆದಾರರು ತಮ್ಮ ಅರ್ಜಿಯೊಂದಿಗೆ ಸಲ್ಲಿಸಬೇಕಾಗಿರುವ ದಾಖಲಾತಿಗಳು**

1. ಗುತ್ತಿಗೆದಾರರು ತಾವು ಸಕಾಲದಲ್ಲಿ ಪೂರ್ಣಗೊಳಿಸಿರುವ ರೂ. 10.00 ಲಕ್ಷಗಳ ಮತ್ತು ಮೇಲ್ಪಟ್ಟ ಕಟ್ಟಡ ಕಾಮಗಾರಿಯನ್ನು 5 ವರ್ಷಗಳ ಅವಧಿಯಲ್ಲಿ ಒಂದು ಆರ್ಥಿಕ ವರ್ಷದ ಅವಧಿಯಲ್ಲಿ ತೃಪ್ತಿಕರವಾಗಿ ಪೂರೈಸಿರುವುದರ ಬಗ್ಗೆ ಕಾರ್ಯನಿರ್ವಾಹಕ ಇಂಜನಿಯರ್ ದರ್ಜೆಗೆ ಕಡಿಮೆಯಿರದ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದ ಯೋಗ್ಯತಾ ಪತ್ರವನ್ನು ಗುತ್ತಿಗೆದಾರರ ಟೆಂಡರ್ ಜೊತೆಗೆ ಹಾಜರು ಪಡಿಸಬೇಕು. ಹಾಗೆ ಮಾಡಲು ವಿಫಲರಾದರಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.

2. ಗುತ್ತಿಗೆದಾರರು ನೊಂದಾಣಿ ಮತ್ತು ನವೀಕರಣ ಪ್ರಮಾಣ ಪತ್ರದ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಯಿಂದ ಕ್ರಮವಾಗಿ ಪ್ರಮಾಣೀಕರಿಸಿ, ಟೆಂಡರ್‌ನೊಂದಿಗೆ ಸಲ್ಲಿಸುವುದು.

3. ಟೆಂಡರ್ ದಾಖಲೆಗಳ ವೆಚ್ಚ ನಗದು ಅಥವಾ ಡಿ.ಡಿ. ಯನ್ನು ಸಲ್ಲಿಸುವುದು.

**ಸೂಚನೆ:**

1) ಯಾವ ಕಾರಣವನ್ನು ಸಹಾ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.

2) ಟೆಂಡರ್ ಫಾರಂಗಳನ್ನು ನೀಡುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕವನ್ನು ತಂದು ಅದರಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ಇಲ್ಲದಿದ್ದರೆ ಟೆಂಡರ್ ಫಾರಂಗಳಿಗಾಗಿ ಹಣ ಪಾವತಿ ಮಾಡಿದ್ದರೂ ಸಹಾ ಟೆಂಡರ್ ಫಾರಂಗಳನ್ನು ನೀಡುವುದಿಲ್ಲ ಹಾಗೂ ಟೆಂಡರ್ ಫಾರಂ ಬೆಲೆಯನ್ನು ಹಿಂದಿರುಗಿಸುವುದಿಲ್ಲ.

3) ಭರ್ತಿ ಮಾಡಲ್ಪಟ್ಟ ಟೆಂಡರ್ ನಮೂನೆಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕದಲ್ಲಿ ಸಂಭಂಧ ಪಟ್ಟವರಿಂದ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು, ಇಲ್ಲದ ಪಕ್ಷದಲ್ಲಿ ಭರ್ತಿ ಮಾಡಲ್ಪಟ್ಟ ಟೆಂಡರ್ ನಮೂನೆಗಳನ್ನು ಪೆಟ್ಟಿಗೆಗೆ ಹಾಕಲು ಅವಕಾಶ ನೀಡುವುದಿಲ್ಲ.

ಸದರಿ ವಿಷಯದಲ್ಲಿ ಹೆಚ್ಚಿನ ವಿಷಯಗಳಿಗೆ ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಲು ಕೋರಿದೆ.

ಕಾರ್ಯನಿರ್ವಾಹಕ ಇಂಜನಿಯರ್,
ಲೋ.ಇ. ವಿಭಾಗ, ಕೋಲಾರ.

ಪಿ.ಆರ್. 14

## ತೋಟಗಾರಿಕೆ ಇಲಾಖೆ

## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯ ವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ, ಬೆಂಗಳೂರು

### ರಾಜ್ಯವಲಯ ತೋಟಗಾರಿಕೆ ಕ್ಷೇತ್ರಗಳ ಸಪೋಟ ಫಸಲಿನ ವಿಲೇವಾರಿಗೆ ಟೆಂಡರ್ ಪ್ರಕಟಣೆ

**ಸಂ:ಹಿಸತೋನಿ:ರಾವ:ಬೆಂಗ್ರಾ:ತಾಂಸ:59:06-07, ದಿನಾಂಕ: 8ನೇ ಜನವರಿ 2007**

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ ರವರ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ತೋಟಗಾರಿಕೆ ಕ್ಷೇತ್ರ:ಸಸ್ಯಾಗಾರಗಳಲ್ಲಿ 2007ನೇ ಸಾಲಿನ ಮೊದಲನೇ ಅವಧಿಯ ಪೈಪೋಟ ಫಸಲಿನ ವಿಲೇವಾರಿಗೆ ಇಲಾಖೆಯ ಪರಿಷ್ಕೃತ ನಿಯಮಾವಳಿಗಳ ಪ್ರಕಾರ ಟೆಂಡರ್ ಪ್ರಕಟಣೆಯನ್ನು ಹೊರಡಿಸಿದೆ. ಟೆಂಡರ್ ಪ್ರಕ್ರಿಯೆಯನ್ನು ಅನುಬಂಧದಲ್ಲಿ ತಿಳಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಕರು (ರಾಜ್ಯ ವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಉದ್ಯಾನವನ ರವರ ಕಛೇರಿಲ್ಲಿ ನಡೆಸಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಮತ್ತು ವ್ಯಾಪಾರಸ್ಥರು ಸದರಿ ಪ್ರಕ್ರಿಯೆಯಲ್ಲಿ ಭಾಗವಹಿಸಲು ಕೋರಲಾಗಿದೆ. ಹೆಚ್ಚಿನ ಪರಿಷ್ಕೃತ ನಿಯಮಾವಳಿಗಳ ವಿವರಗಳನ್ನು ನಿಬಂಧನೆ ಮತ್ತು ಷರತ್ತುಗಳನ್ನು ಈ ಕಛೇರಿಯಲ್ಲಿ ಅಥವಾ ಸಂಬಂಧಪಟ್ಟ ಕ್ಷೇತ್ರಗಳಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯ ವಲಯ)
ಬೆಂಗಳೂರು (ಗ್ರಾ.) ಜಿಲ್ಲೆ ಕಬ್ಬನ್ ಪಾರ್ಕ್, ಬೆಂಗಳೂರು - 560 001

**ಅನುಬಂಧ**

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ ಸಸ್ಯಾಗಾರದ ಹೆಸರು | ಫಸಲಿನ ಹೆಸರು | ಗಿಡಗಳ ಸಂಖ್ಯೆ | ಫಸಲನ್ನು ರೂಢಿಸಿಕೊಳ್ಳುವ ಕೊನೆ ದಿನಾಂಕ | ಠೇವಣಿ ಮೊತ್ತ ರೂ. | ಟೆಂಡರ್ ಸಲ್ಲಿಸಲು ಕೊನೆ ದಿನಾಂಕ ಮತ್ತು ವೇಳೆ | ಟೆಂಡರ್ ನಡೆಸುವ ದಿನಾಂಕ ಮತ್ತು ವೇಳೆ |
|---|---|---|---|---|---|---|---|
| 1 | ರಾಮನಗರ ಸಸ್ಯಾಗಾರ, ರಾಮನಗರ ಟೌನ್ | ಸಪೋಟ | 109 | 30.6.2007 | 2000 | 7.2.2007 3.00 ಗಂಟೆ | 7.2.2007 3.30 ಗಂಟೆ |
| 2 | ಚನ್ನಪಟ್ಟಣ ಸಸ್ಯಾಗಾರ ಚನ್ನಪಟ್ಟಣ ಟೌನ್ | ಸಪೋಟ | 25 | 30.6.2007 | 500 | 7.2.2007 3.00 ಗಂಟೆ | 7.2.2007 3.45 ಗಂಟೆ |
| 3 | ಬಗಿನಗೆರೆಕಾವಲ್ ತೋ. ಕ್ಷೇತ್ರ ಮಾಗಡಿ ತಾ: | ಸಪೋಟ | 650 | 30.6.2007 | 5000 | 8.2.2007 3.00 ಗಂಟೆ | 8.2.2007 3.30 ಗಂಟೆ |
| 4 | ಕನಕಪುರ ತೋ.ಕ್ಷೇತ್ರ ಕನಕಪುರ ಟೌನ್ | ಸಪೋಟ | 144 | 30.6.2007 | 2000 | 13.2.2007 3.00 ಗಂಟೆ | 13.2.2007 3.30 ಗಂಟೆ |
| 5 | ತಿಪ್ಪಗೊಂಡನಹಳ್ಳಿ ತೋ. ಕ್ಷೇತ್ರ, ನೆಲಮಂಗಲ ತಾ: | ಸಪೋಟ | 700 | 30.6.2007 | 5000 | 14.2.2007 3.00 ಗಂಟೆ | 14.2.2007 3.30 |
| 6 | ನೆಲಮಂಗಲ ಸಸ್ಯಾಗಾರ ನೆಲಮಂಗಲ ಟೌನ್ | ಸಪೋಟ | 10 | 30.6.2007 | 200 | 14.2.2007 3.00 ಗಂಟೆ | 4.2.2007 3.45 ಗಂಟೆ |
| 7 | ದೊಡ್ಡಬಳ್ಳಾಪುರ ತೋ. ಕ್ಷೇತ್ರ ದೊ.ಬ.ಪುರ ಟೌನ್ | ಸಪೋಟ | 295 | 30.6ಯ2007 | 2000 | 15.2.2007 3.00 ಗಂಟೆ | 15.2.2007 3.30 ಗಂಟೆ |
| 8 | ಭೈರಮಂಗಲ ತೋ.ಕ್ಷೇತ್ರ ರಾಮನಗರ ತಾ: | ಸಪೋಟ | 149 | 30.6.2007 | 2000 | 20.2.2007 3.00 ಗಂಟೆ | 20.2.2007 3.30 ಗಂಟೆ |
| 9 | ಇಂದಿರಾನಗರ ತೋ.ಕ್ಷೇತ್ರ ಬೆಂಗಳೂರು ನಗರ | ಸಪೋಟ | 164 | 30.6.2007 | 2000 | 21.2.2007 3.00 ಗಂಟೆ | 21.2.2007 3.30 ಗಂಟೆ |

**ವಿಶೇಷ ಸೂಚನೆ:** ಟೆಂಡರ್ ನಡೆಯುವ ಸ್ಥಳ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ (ರಾಜ್ಯ ವಲಯ) ಕಬ್ಬನ್ ಉದ್ಯಾನವನ, ಬೆಂಗಳೂರು-1 (ವಿಶ್ವೇಶ್ವರಯ್ಯ ಮ್ಯೂಸಿಯಂ ಹಿಂಭಾಗ)

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯ ವಲಯ)
ಪಿ.ಆರ್. 26 ಬೆಂಗಳೂರು (ಗ್ರಾ.) ಜಿಲ್ಲೆ ಕಬ್ಬನ್ ಪಾರ್ಕ್, ಬೆಂಗಳೂರು - 560 001

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ಇಲಾಖೆ ಶಿವಮೊಗ್ಗ ವಿಭಾಗ, ಶಿವಮೊಗ್ಗ.

### ಅಲ್ಪಾವದಿ ಟೆಂಡರ್ ಪ್ರಕಟಣೆ

**ಟೆಂಡರ್ ಪ್ರಕಟಣೆ ಸಂಖ್ಯೆ ಕಾಪಾಅ/ಶಿವಿಶಿ/ ಸ.ಇಂ-2/ಮೇ.ಸೇತುವೆ-29 2006-07/ ಶಿವಮೊಗ್ಗ, ದಿನಾಂಕ: 3ನೇ ಜನವರಿ 2007**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧ್ಯಾದೇಶ 2000 ಪ್ರಕಾರ ಆಕ್ಟ್ 2000ದ ನಿಯಮದಂತೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಮದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಐಟಂ ರೇಟ್ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗಡೆ ಸಹಿ ಮಾಡಿರುವವರಿಂದ ಆಹ್ವಾನಿಸಲಾಗಿದೆ. ಅವುಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.30 ಗಂಟೆಯವರೆಗೆ

ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಸಾಯಂಕಾಲ 5.00 ಗಂಟೆಗೆ ಅಥವಾ ಇತರೆ ಅನುಕೂಲವಾದ ದಿನ ಟೆಂಡರುದಾರರು ಅಥವಾ ಅವರ ಏಜೆಂಟರುಗಳ ಸಮ್ಮುಖದಲ್ಲಿ ತೆರೆಯವಾಗುವುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು. ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ. ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್., ಸಿ.ಡಿ.ಆರ್ (ಕಾರ್ಯಪಾಲಕ ಅಭಿಯಂತರು ಲೋಕೋಪಯೋಗಿ ಇಲಾಖೆ ವಿಭಾಗ ಶಿವಮೊಗ್ಗ ಇವರ ಹೆಸರಿಗೆ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ) ಬ್ಯಾಂಕ್ ಗ್ಯಾರಂಟಿ (ಕನಿಷ್ಠ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ, ಕಾರ್ಯಪಾಲಕ ಅಭಿಯಂತರರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.

**ಟೆಂಡರಿಗಿಟ್ಟ ಕಾಮಗಾರಿಗಳ ವಿವರ**

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರಿಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇಎಂಡಿ ಮೊತ್ತ (ರೂ.ಗಳಲ್ಲಿ) | ಟೆಂಡರ್ ಫಾರಂ ಬೆಲೆ (ರೂ. ಗಳಲ್ಲಿ) | ಅರ್ಹರಾದ ಗುತ್ತಿಗೆ ದಾರರು | ಟೆಂಡರ್ ಕಾಮಗಾರಿ ಗಳನ್ನು ಪರಿಪೂರ್ಣ ವಾಗಿ ಮುಗಿಸಲು ನಿಗದಿಪಡಿಸಿದ ಕಾಲಾವಧಿ | ಟೆಂಡರ್ ಫಾರಂಗಳಿಗೆ ಅರ್ಜಿಯನ್ನು ಸ್ವೀಕರಿಸುವ ದಿನಾಂಕ ಸಂಜೆ 5.30ರ ವರೆಗೆ | ಖಾಲಿ ಟೆಂಡರ್ ಫಾರಂ ಕೊಡುವ ದಿನಾಂಕ ಸಂಜೆ 5.30 ರವರೆಗೆ | ಭರ್ತಿ ಮಾಡಿದ ಟೆಂಡರ್ ಫಾರಂ ಸ್ವೀಕರಿಸುವ ದಿನಾಂಕ ಸಂಜೆ 4.30 ಗಂಟೆಗೆ ವರೆಗೆ |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಶಿವಮೊಗ್ಗ ನಗರದಲ್ಲಿ ಪರಿಮಿತಿಯಲ್ಲಿ ಹೊಸಪೇಟೆ ಮಂಗಳೂರು ರಾಜ್ಯ ಹೆದ್ದಾರಿ- 25 ರಲ್ಲಿ ಈಗಿರುವ ಎಲ್.ಸಿ-48ರಲ್ಲಿ ರೈಲ್ವೆ ಮೇಲು ಸೇತುವೆ ಕೂಡು ರಸ್ತೆ ನಿರ್ಮಾಣ | 555.24 | 5,55,240 | 15,000 + ತೆರಿಗೆ | 1ನೇ ದರ್ಜೆ | 12 ತಿಂಗಳು ಮಳೆಗಾಲ ಸೇರಿ | 1.2.2007 | 7.2.2007 ರಿಂದ 9.2.2007 | 13.2.2007 |

**ನಿಬಂಧನೆಗಳು :**

- ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ ನಂ:ಪಿ.ಡಬ್ಲ್ಯುಡಿ. 344 ಸಿ.ಆರ್‌ಎಮ್ 2000 ದಿನಾಂಕ:15.1.2002ರ ಪ್ರಕಾರ ಈ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡ 30 ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಧಿಯಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.
- ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಗಳನ್ನು ವಿಳಂಬವಾಗಿ ಪೂರೈಸಿರಬಾರದು.
- ಸದರಿ ಕಾಮಗಾರಿಗೆ ಭಾಗವಹಿಸುವ ಗುತ್ತಿಗೆದಾರರು ಕೆಲಸಕ್ಕೆ ಅವಶ್ಯಕವಾದ 1- ಹಾಟ ಮಿಕ್ಸ್, 1-ಪೇವರ್, 1-ವೈಬ್ರೇಟರ್ ರೋಲರ್, 2-ರೋಲರ್, 4-ಟಿಪ್ಪರ್, 1-ಮೆಕಾನಿಕಲ್ ಸ್ಪ್ರೇಯರ್, 1-ಬ್ಯಾಚಿಂಗ್ ಪ್ಲಾಂಟ, 4-ಕಾಂಕ್ರೀಟ್, ಮಿಕ್ಸರ್, 6 ಪಿನ್ ವೈಬ್ರೇಟರ್, 4 ಪ್ಲಾಟ ವೈಬ್ರೇಟರ್, 2 ಸ್ವಯಂ ಚಾಲಿತ ಲಿಫ್ಟ್, ಸೆಂಟರಿಂಗ್ ಮೇಟಿರೀಯಲ್ಸ್ ಹಾಗೂ ಇತರೆ ಸೇತುವೆ ಮತ್ತು ಕೂಡು ರಸ್ತೆಗೆ ಅವಶ್ಯಕವಾದ ವಸ್ತುಗಳ ಮಾಲಿಕತ್ವ ಹೊಂದಿರಬೇಕು. ಈ ಎಲ್ಲ ಯಂತ್ರೋಪಕರಣ ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ನೋಟರಿಯವರ ಮುಂದೆ ಪ್ರಮಾಣಿಕರಿಸಿದ ಪತ್ರಗಳೊಂದಿಗೆ ಹಾಗೂ ಆದಾಯ ತೆರಿಗೆ, ವಾಣಿಜ್ಯ ತೆರಿಗೆ ಸಂದಾಯದ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದು.
- ಸದರಿ ಕಾಮಗಾರಿಯು 2 ಲಕೋಟೆಗಳನ್ನು ಹೊಂದಿದ್ದು ಲಕೋಟೆ-ಎ:ಟೆಕ್ನಿಕಲ್ ಬಿಡ್, ಲಕೋಟೆ-ಬಿ: ಫೈನಾನ್ಷಿಯಲ್ ಬಿಡ್ ಗಳನ್ನು ಹೊಂದಿರುತ್ತದೆ. ಟೆಂಡರ್‌ದಾರರು ಟೆಂಡರ್‌ಗಳನ್ನು 2 ಪ್ರತ್ಯೇಕ ಲಕೋಟೆಗಳಲ್ಲಿ, ಮೊಹರಾದ ಲಕೋಟೆಯ ಮೇಲೆ ಲಕೋಟೆ-ಎ: ಟೆಕ್ನಿಕಲ್ ಬಿಡ್, ಲಕೋಟೆ- ಬಿ : ಫೈನಾನ್ಷಿಯಲ್ ಬಿಡ್ ಎಂದು ನಯದಿಸಿ ಮತ್ತೊಂದು ಲಕೋಟೆಯಲ್ಲಿ ಹಾಕಿ ಟೆಕ್ನಿಕಲ್ ಬಿಡ್, ಫೈನಾನ್ಷಿಯಲ್ ಬಿಡ್ ಎಂದು ನಮೂದಿಸಿ ಟೆಂಡರ್ ಸಲ್ಲಿಸತಕ್ಕದ್ದು.
- ಲಕೋಟೆ-ಎ: ಟೆಕ್ನಿಕಲ್ ಬಿಡ್‌ಅನ್ನು ದ್ವಿಪ್ರತಿಗಳಲ್ಲಿ ಗುತ್ತಿಗೆದಾರರ ಬಳಿ ಇರುವ ತಾಂತ್ರಿಕ ಮಾಹಿತಿಗಳನ್ನು ಹೊಂದಿದ್ದು ಅವುಗಳಿಗೆ ವಿವರಗಳನ್ನು ನಿಗದಿತ ರೀತಿಯಲ್ಲಿ ಸಲ್ಲಿಸಬೇಕು. ಹಾಗು ಕಾಮಗಾರಿಗೆ ಅವಶ್ಯಕವಾದ ಇ.ಎಂ.ಡಿ. ನಿಗದಿಪಡಿಸಿದ ಮೊತ್ತವನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್, ಸಿ.ಡಿ.ಆರ್ (ಕಾರ್ಯಪಾಲಕ ಅಭಿಯಂತರು ಲೋಕೋಪಯೋಗಿ ಇಲಾಖೆ ವಿಭಾಗ ಶಿವಮೊಗ್ಗ ಇವರ ಹೆಸರಿಗೆ ಶಿವಮೊಗ್ಗದಲ್ಲಿ ಪಾವತಿಯಾಗುವಂತೆ) ಬ್ಯಾಂಕ್ ಗ್ಯಾರಂಟಿ (ಕನಿಷ್ಠ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ ಆಗಿದ್ದಲ್ಲಿ ಕಾರ್ಯಪಾಲಕ ಅಭಿಯಂತರವರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.
- ಲಕೋಟೆ-ಬಿ: ಫೈನಾನ್ಷಿಯಲ್ ಬಿಡ್ ಅನ್ನು, ಟೆಂಡರ್ ಶೆಡ್ಯೂಲನ್ನು ದ್ವಿ ಪ್ರತಿಯಲ್ಲಿ ಹೊಂದಿದ್ದು, ಪ್ರತಿ ಐಟಂಗಳಿಗೆ ದರವನ್ನು ಅಂಕೆಯಲ್ಲಿ ಮತ್ತು ಅಕ್ಷರಗಳಲ್ಲಿ ಸಲ್ಲಿಸಬೇಕು. ಲಕೋಟೆ-ಎ ಅನ್ನು ಮೊದಲು ತೆರೆಯಲಾಗುವುದು ಹಾಗೂ ಗುತ್ತಿಗೆದಾರರು ಇದರಲ್ಲಿ ಒದಗಿಸಿರುವ ವಿವರಗಳನ್ನು ಪರಿಶೀಲಿಸಲಾಗುವುದು. ಕಮೀಷನರ್, ಕಮಿಷನರ್ ಆಫ್ ಟೆಂಡರ್ಸ್ ಬೆಂಗಳೂರು ಇವರ ತಂತಿ ಸಂದೇಶ ಸಂಖ್ಯೆ ಸಿ.ಬಿ.ಎಸ್:ಎ.ಬಿ.ಎಫ್: 16.2002-03 ದಿನಾಂಕ :18.6.2002ರ ಆದೇಶದಂತೆ ತಾಂತ್ರಿಕ ಬಿಡ್ಡನ್ನು ಕಾರ್ಯಪಾಲಕ ಅಭಿಯಂತರವರು ತೆರೆದು ತುಲನೆಮಾಡಿ ಸಕ್ಷಮ ಪ್ರಾಧಿಕಾರದವರಿಂದ ಅನುಮೋದನೆಯಾದ ನಂತರ ಲಕೋಟೆ-ಬಿ ಫೈನಾನ್ಷಿಯಲ್ ಬಿಡ್ ಅನ್ನು ತೆರೆಯಲಾಗುವುದು. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

- ಇಲಾಖೆಯಿಂದ ಯಾವುದೇ ವಸ್ತುಗಳನ್ನು ಸರಬರಾಜು ಮಾಡುವುದಿಲ್ಲ. ಕಾಮಗಾರಿಗಳಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟ್ ಇತ್ಯಾದಿಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
- ಅರ್ಜಿದಾರರು ತಮ್ಮ ಗುತ್ತಿಗೆ ನೋಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
- ಗುತ್ತಿಗೆದಾರರು ಕಾಮಗಾರಿ ಮುಕ್ತಾಯಗೊಳಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
- ಗುತ್ತಿಗೆದಾರರು ಸದರಿ ಕಾಮಗಾರಿಯನ್ನು ನಿರ್ವಹಿಸುವ ಆರ್ಥಿಕ ಸಾಮರ್ಥ್ಯದ ಬಗ್ಗೆ ಶೇ 20 ರಷ್ಟು ಕಾಮಗಾರಿಯ ಮೊತ್ತಕ್ಕೆ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಸೂಕ್ತ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು (Line of Credit at 20% of amount put to tender)
- ಗುತ್ತಿಗೆ ಪೆಟ್ಟಿಗೆಗಳನ್ನು ಕೇಂದ್ರ ಕಛೇರಿ ಬೆಂಗಳೂರು, ವೃತ್ತ ಕಛೇರಿ ಶಿವಮೊಗ್ಗ, ಮತ್ತು ವಿಭಾಗ ಕಛೇರಿ ಶಿವಮೊಗ್ಗ ಗಳಲ್ಲಿ ಇಡಲಾಗುವುದು.
- ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ತೆಗೆದುಕೊಂಡು ಹೋಗುವಾಗ ತಮ್ಮ ರಿಜಿಸ್ಟ್ರೇಷನ್ ಪಾಸ್ ಬುಕ್ಕನ್ನು ಒದಗಿಸಿ ಕೆಲಸದ ವಿವರಗಳನ್ನು ದಾಖಲಿಸಿಕೊಳ್ಳತಕ್ಕದ್ದು. ಟೆಂಡರ್ ಫಾರಂಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ.

ಕಾರ್ಯಪಾಲಕ ಅಭಿಯಂತರರು,
ಶಿವಮೊಗ್ಗ ವಿಭಾಗ,ಶಿವಮೊಗ್ಗ.

ಪಿ.ಆರ್. 22

## ಕಾರ್ಯನಿರ್ವಾಹಕ ಇಂಜಿನೀಯರವರ ಕಛೇರಿ, ಲೋಕೋಪಯೋಗಿ ಇಲಾಖೆ ಮಂಗಳೂರು ವಿಭಾಗ, ಮಂಗಳೂರು

### ಟೆಂಡರ್ ಪ್ರಕಟಣೆ - 4ನೇ ಕರೆ

**ಸಂಖ್ಯೆ:8:ಜಿಎನ್‌ಎಲ್: ಟಿಎನ್‌ಡಿ:2006-2007:ಜೇ-1, ದಿನಾಂಕ: 9ನೇ ಜನವರಿ 2007**

ನಬಾರ್ಡ್ ಆರ್.ಐ.ಡಿ.ಎಫ್. XIರ ಯೋಜನೆಯಡಿ ಈ ಕೆಳಗೆ ಸೂಚಿಸಿದ ಕಾಮಗಾರಿಗಳಿಗೆ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ನಿರ್ದಿಷ್ಟ ಫಾರಂನಲ್ಲಿ ಕರ್ನಾಟಕ ಟ್ರಾನ್ಸ್‌ಪೆರನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ಆಕ್ಟ್ 2000ರ ಪ್ರಕಾರ ದ್ವಿಲಕೋಟೆ ಪದ್ಧತಿಯಲ್ಲಿ ಮೊಹರಾದ ಐಟಂ ದರ ಟೆಂಡರುಗಳನ್ನು ಆಹ್ವಾನಿಸಲಾಗಿದೆ. ಟೆಂಡರಿನ ದ್ವಿಲಕೋಟೆ ಬಿಡ್ ಪದ್ಧತಿ, ತಾಂತ್ರಿಕ ಬಿಡ್ ಹಾಗೂ ವಿತ್ತೀಯ (ಫೈನಾನ್ಸಿಯಲ್) ಬಿಡ್ಡನ್ನು ಒಳಗೊಂಡಿದೆ. ಬಿಡ್‌ಗಳನ್ನು ತಾಂತ್ರಿಕ ಬಿಡ್ ಹಾಗೂ ವಿತ್ತೀಯ ಬಿಡ್ ಎಂದು ಗುರುತು ಹಾಕಿದ ಎರಡು ಪ್ರತ್ಯೇಕ ಮೊಹರಾದ ಲಕೋಟೆಗಳಲ್ಲಿ ಎರಡು ಭಾಗಗಳಲ್ಲಿ ಸ್ವೀಕರಿಸಲಾಗುವುದು. ಈ ಎರಡು ಲಕೋಟೆಗಳಿಗೆ ಮೊಹರು ಮಾಡಿ ಕೆಲಸದ ಶಿರೋನಾಮೆ ನಮೂದಿಸಿ ಇನ್ನೊಂದು ಮೊಹರಾದ ಲಕೋಟೆಯಲ್ಲಿಡಬೇಕು ಮತ್ತು ಬಿಡ್ಡುದಾರರ ಹೆಸರು ಹಾಗೂ ಪೂರ್ತಿ ಅಂಚೆ ವಿಳಾಸದೊಂದಿಗೆ ಕೆಳಸಹಿದಾರರಿಗೆ ಕಳುಹಿಸಬೇಕು. ಪೂರ್ತಿಗೊಳಿಸಿದ ಬಿಡ್ಡನ್ನು ಶೆಡ್ಯೂಲ್‌ನಲ್ಲಿ ಒಳಗೊಂಡ ವಿಶೇಷ ನಿಯಮಗಳ ಕೆಪಿಡಬ್ಲ್ಯೂಡಿ ಕೋಡ್ ವಾಲ್ಯೂಂ-2ರ ಫಾರಂನಲ್ಲಿ ಪಿಡಬ್ಲ್ಯೂಜಿ-65 ಹಾಗೂ 66 ರಲ್ಲಿ ಹಾಗೂ ಕರ್ನಾಟಕ ಟ್ರಾನ್ಸ್‌ಪೆರನ್ಸಿ ಇನ್ ಪಬ್ಲಿಕ್ ಪ್ರೊಕ್ಯೂರ್‌ಮೆಂಟ್ ಆಕ್ಟ್ 2000ರಲ್ಲಿ ನಿರೂಪಿತ ಶರ್ತಗೊಳಪಟ್ಟು ದಿನಾಂಕ: 8.2.2007ರಂದು ಸಂಜೆ: 4.00 ಗಂಟೆಯ ವರೆಗೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಸ್ವೀಕರಿಸುವರು. ಈ ಕೆಳಗೆ ಸೂಚಿತ ದಿನಾಂಕದಂದು ತಾಂತ್ರಿಕ ಬಿಡ್ಡನ್ನು ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾಗಿರುವ ಬಿಡ್‌ದಾರರ ವಿತ್ತೀಯ ಬಿಡ್‌ಗಳನ್ನು ಮಾತ್ರ ತೆರೆಯಲಾಗುವುದು. ಈ ಕೆಳಗೆ ನಮೂದಿಸಿದ ಯಾವುದಾದರೂ ದಿನಾಂಕಗಳಂದು ಸಾರ್ವತ್ರಿಕ ರಜಾವಾದಲ್ಲಿ ಮುಂದಿನ ದಿನಾಂಕವನ್ನು ಪ್ರತ್ಯೇಕವಾಗಿ ತಿಳಿಸಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ. ಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇಎಂಡಿ ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಸೇರಿ) | ಟೆಂಡರು ನಮೂನೆ | ಟೆಂಡರು ಫಾರಂ ಬೆಲೆ (ರೂ. ಗಳಲ್ಲಿ) |
|---|---|---|---|---|---|---|---|
| 1. | ಸುಳ್ಯ ತಾಲ್ಲೂಕಿನ ಬೈತ್ತಡ್ಕ-ಮಂಡೆಕೋಲು ರಸ್ತೆಯ (ಆಯ್ದ ಚಾಚುಗಳಲ್ಲಿ) ಅಭಿವೃದ್ಧಿ | ರೂ. 87.62 | ಒಂದನೇ ದರ್ಜೆ | ರೂ. 88,000.00 | 12 ತಿಂಗಳು | ದರವಾರು | ರೂ. 3300.00 |

**ಸಾಮಾನ್ಯ ನಿಯಮಗಳು:-**

1. ಖಾಲಿ ಟೆಂಡರು ಫಾರಂಗಳಿಗೆ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂದಿರುಗಿಸಲಾಗುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ:7.2.2007ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀರಿಸಲಾಗುವುದು. ಅರ್ಜಿ ಜೊತೆಗೆ ಗುತ್ತಿಗೆದಾರರು ಅವರ ರಿಜಿಸ್ಟ್ರೇಷನ್‌ನ ಸರ್ಟಿಫೈಡ್ ಪ್ರತಿಯನ್ನು ಸಲ್ಲಿಸತಕ್ಕದ್ದು. ಕೆಲಸದ ಬಿಡ್ಡಿಂಗ್‌ನಲ್ಲಿ ಆಸಕ್ತಿಯುಳ್ಳ ಗುತ್ತಿಗೆದಾರರು ನಗದಾಗಿ ಅಥವಾ ಮಂಗಳೂರಿನಲ್ಲಿ ಪಾವತಿ ಆಗುವಂತೆ ಕಾರ್ಯಕಾರಿ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರ ಹೆಸರಿಗೆ ಪಡೆದ ಡಿ.ಡಿ. ರೂಪದಲ್ಲಿ ಪಾವತಿಸಬೇಕಾದ ಟೆಂಡರ್ ಶೆಡ್ಯೂಲ್ ಮೌಲ್ಯದೊಂದಿಗೆ (ಇದನ್ನು ಹಿಂದಿರುಗಿಸುವುದಿಲ್ಲ) ಕೆಳ ಸಹಿದಾರರಿಗೆ ಅರ್ಜಿ ಸಲ್ಲಿಸಬೇಕು. ಅರ್ಜಿ ಜೊತೆ ಗುತ್ತಿಗೆದಾರರ ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿಯೊಂದಿಗೆ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್. / ಕಾಲ್‌ಡೆಪೋಸಿಟ್, ಬ್ಯಾಂಕ್ ಗ್ಯಾರಂಟಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್.ಎಸ್.ಸಿ.ಯನ್ನು ಕೆಳ ಸಹಿದಾರರ ಹೆಸರಿಗೆ ಪ್ಲೆಜ್ ಮಾಡಬೇಕು) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದಿರುವ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ದಿನಾಂಕದ ವಿವರಗಳು ಈ ಕೆಳಕಂಡಂತಿದೆ:-
   (ಅ) ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 7.2.2007ರ ಕಛೇರಿ ಕೆಲಸದ ವೇಳೆಯಲ್ಲಿ
   (ಆ) ಖಾಲಿ ಟೆಂಡರು ಫಾರಂಗಳನ್ನು ಕೊಡುವ ದಿನಾಂಕ: 7.2.2007ರ ಕಚೇರಿ ಕೆಲಸದ ವೇಳೆಯಲ್ಲಿ
   (ಇ) ಟೆಂಡರು ಸಲ್ಲಿಸುವ ಕೊನೆಯ ದಿನಾಂಕ: 8.2.2007ರ ಅಪರಾಹ್ನ 4.00 ವರೆಗೆ
   (ಈ) ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ: 9.2.2007ರ ಪೂರ್ವಾಹ್ನ: 11.00ಕ್ಕೆ ಅಥವಾ ಮುಂದೆ ತಿಳಿಸಲಾಗುವ ಸಮಯ ಮತ್ತು ದಿನಾಂಕದಂದು.

